# ಬಸವಣ್ಣನವರ ವಚನಗಳಲ್ಲಿ ಅಂತರಂಗ ಶೋಧ: ಒಂದು ಅಧ್ಯಯನ

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ನಿಬಂಧ)


ಸಂಶೋಧಕರು

ದಂಡೆ ನಂದೀಶ್ವರ





ಮಾರ್ಗದರ್ಶಕರು

ಡಾ. ಮಲ್ಲಿಕಾರ್ಜುನ ವಣೇನೂರು

ಮುಖ್ಯಸ್ಥರು

ಹಾಗೂ ಸಹಾಯಕ ಪ್ರಾಧ್ಯಾಪಕರು







ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ,

ವಿದ್ಯಾರಣ್ಯ, ಹಂಪಿ.


೨೦೦೯-೧೦

# ಬಸವಣ್ಣನವರ ವಚನಗಳಲ್ಲಿ ಅಂತರಂಗ ಶೋಧ: ಒಂದು ಅಧ್ಯಯನ

(ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕರು

ದಂಡೆ ನಂದೀಶ್ವರ

ಮಾರ್ಗದರ್ಶಕರು

ಡಾ. ಮಲ್ಲಿಕಾರ್ಜುನ ವಣೇಸೂರು

ಮುಖ್ಯಸ್ಥರು

ಹಾಗೂ ಸಹಾಯಕ ಪ್ರಾಧ್ಯಾಪಕರು



ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ,

ವಿದ್ಯಾರಣ್ಯ, ಹಂಪಿ.

೨೦೦೯-೧೦



## ಸಂಶೋಧಕರ ಪ್ರಮಾಣ ಪತ್ರ

**ಬಸವಣ್ಣನವರ ವಚನಗಳಲ್ಲಿ ಅಂತರಂಗ ಶೋಧ: ಒಂದು ಅಧ್ಯಯನ** ಎಂಬ ನಿಬಂಧವನ್ನು **ಡಾ. ಮಲ್ಲಿಕಾರ್ಜುನ ವಣೇಸೂರು** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್. ಪದವಿಗಾಗಿ ಭಾಷಾ ನಿಕಾಯದ ಕನ್ನಡ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಈ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ
ದಿನಾಂಕ: ೧೨/೮/೧೦

**ದಂಡೆ ನಂದೀಶ್ವರ**
ಸಂಶೋಧಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಮಾರ್ಗದರ್ಶಕರ ದೃಢೀಕರಣ ಪತ್ರ

**'ಬಸವಣ್ಣನವರ ವಚನಗಳಲ್ಲಿ ಅಂತರಂಗ ಶೋಧ: ಒಂದು ಅಧ್ಯಯನ'** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ **ದಂಡೆ ನಂದೀಶ್ವರ** ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ
ದಿನಾಂಕ: ೧೫/೬/೧೦

**ಡಾ. ಮಲ್ಲಿಕಾರ್ಜುನ ವಣೇನೂರು**
ಮಾರ್ಗದರ್ಶಕರು
ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ

# ಪರಿವಿಡಿ

# ಅಧ್ಯಾಯ ೧

# ಅಧ್ಯಯನದ ಸ್ವರೂಪ, ಮಹತ್ವ, ವ್ಯಾಪ್ತಿ ಹಾಗೂ ವಿಧಾನ

## ಪ್ರವೇಶ

ಹನ್ನೆರಡನೇ ಶತಮಾನದ ವಚನ ಸಾಹಿತ್ಯ ಚಳುವಳಿಯು ಅನೇಕ ಹೊಸ ತಾತ್ವಿಕತೆಯನ್ನು ಹುಟ್ಟು ಹಾಕಿತು. ಹನ್ನೆರಡನೇ ಶತಮಾನದ ಪೂರ್ವದಲ್ಲಿ ಮತ್ತು ಹನ್ನೆರಡನೇ ಶತಮಾನದ ಸಮಕಾಲೀನ ಪ್ರಪಂಚದಲ್ಲಿ ಚಾತುರ್ವರ್ಣ ಪದ್ಧತಿಯಿಂದ ಸಮಾಜ ಅನೇಕ ಶೋಷಣೆಗಳಿಂದ ಜಾತಿ ಮೂಲದಿಂದ ಬಡವಾಗಿತ್ತು. ವೈದಿಕ ಧರ್ಮ ತನ್ನಲ್ಲಿ ಮತ್ತು ಸಮಾಜದ ಇನ್ನಿತರ ವರ್ಣಗಳಾದ ಶೂದ್ರ ಮತ್ತು ಪಂಚಮರನ್ನು ತನ್ನ ಅಧೀನದಲ್ಲಿಟ್ಟುಕೊಂಡು ಶೋಷಣೆ ಮಾಡುತ್ತಿತ್ತು. ಮೂಲವಾಗಿ ಅಸ್ಪೃಶ್ಯರು, ಕೆಳವರ್ಗದವರು ಆದ ಪಂಚಮರು ಅತ್ಯಂತ ಹೇಯವಾದ ಸ್ಥಾನದಲ್ಲಿದ್ದರು. ಅವರನ್ನು ತಮ್ಮ ಸ್ವಾರ್ಥ ಸಾಧನೆಗಾಗಿಯೇ ಅಂದಿನ ಮೇಲ್ವರ್ಗದ ಜಾತಿ ಸಮಾಜದವರು ಬಳಸಿಕೊಳ್ಳುತ್ತಿದ್ದರು. ಪಂಚಮರಿಗೂ ಒಂದು ಮನಸ್ಸುಂಟು. ಅವರು ಮನುಷ್ಯರು ಎಂದು ಗುರುತಿಸುವ, ತಿಳಿಯುವ ಮನಸ್ಸು, ಸಮಾನತೆಯ ದೃಷ್ಟಿ ಅಂದಿನ ಶೋಷಕ ಸಮುದಾಯದ ಯಾರಿಗೂ ಇರಲಿಲ್ಲ. ಆದರೂ ಪಂಚರಿಂದ ಹಾಗೂ ಇತರ ಕೆಳಜಾತಿಯ ಶೂದ್ರರಿಂದ ಸಮಾಜಕ್ಕೆ ಬೇಕಾದಷ್ಟು ಒಳಿತಾಗುತ್ತಿತ್ತು. ಇವರ ದುಡಿಮೆಯಿಂದಲೇ ಮೇಲ್ವರ್ಗದವರ ಬದುಕು ಹಸನವಾಗುತ್ತಿತ್ತು. ಆದರೂ ಇದನ್ನು ಶೂದ್ರರಾಗಲಿ, ವೈಶ್ಯರಾಗಲೀ, ಕ್ಷತ್ರೀಯರಾಗಲೀ, ಬ್ರಾಹ್ಮಣರಾಗಲೀ ಪರಿಗಣಿಸುತ್ತಿರಲಿಲ್ಲ. ಧರ್ಮ ಇವರ ಪಾಲಿಗೆ ಇರಲೇ ಇಲ್ಲ. ಸಮಾಜದ ಕೊನೆಯ ಅಂಚಿನಲ್ಲಿ ಮೂಲೆಯಲ್ಲಿ ಮತ್ತು ಕತ್ತಲಲ್ಲಿ ಇವರ ಜೀವನ ಸಾಗುತ್ತಿತ್ತು. ಭಾರತದಲ್ಲಿ ಭಕ್ತಿ ಚಳುವಳಿ ಆರಂಭವಾದ ಮೇಲೆ ಭಕ್ತರಾದವರು, ಸಮಾಜದಲ್ಲಿ ಶ್ರೇಷ್ಠ ಎಂಬ ಪರಿಕಲ್ಪನೆ ಮೂಡಿತು. ಸಮಾಜದ ಬೇರೆ ಬೇರೆ ವರ್ಗಗಳಲ್ಲಿ ಭಕ್ತಿ ಚಳುವಳಿ ಜಾಗೃತಿಯನ್ನುಂಟುಮಾಡಿತು. ವೈದಿಕರ ಹಿಡಿತದಲ್ಲಿದ್ದ ಧರ್ಮ, ದೇವರು, ಮಡಿ, ಮೈಲಿಗೆ, ಕರ್ಮ, ಯಜ್ಞಯಾಗ, ಆಚರಣೆಗಳು ಮುಂತಾದ ಹೆಸರುಗಳ ಮೇಲೆ ನಡೆಸುತ್ತಿದ್ದ ಶೋಷಣೆಗೆ ಭಕ್ತಿ ಚಳುವಳಿ ತಡೆಯನ್ನುಂಟುಮಾಡಿತು. ಇದರ ಪರಿಣಾಮವಾಗಿ ಪಂಚಮರು, ಶೂದ್ರರು, ಸಮಾಜದ ಕೆಳಸ್ತರದ ವರ್ಗದ ಜಾತಿಯವರು ಭಕ್ತಿ ಚಳುವಳಿಯಲ್ಲಿ ಸೇರಿ, ತಮ್ಮ ಸ್ಥಾನಮಾನಗಳನ್ನು ಎತ್ತಿಸಿಕೊಂಡು ನೆಮ್ಮದಿಯಿಂದ ಬದುಕತೊಡಗಿದರು.

ಕರ್ನಾಟಕದ ಸಂದರ್ಭದಲ್ಲಿ ಶರಣ ವಚನಕಾರರು ಈ ಮಹಾ ಚಳುವಳಿಗೆ ಕಾರಣರಾದರು. ಚರಿತ್ರೆಯಲ್ಲಿ ಗುರುತಿಸಲಾಗಿರುವಂತೆ ಹನ್ನೆರಡನೇ ಶತಮಾನದಲ್ಲಿ ಬಿಜ್ಜಳನ ರಾಜ್ಯದಲ್ಲಿ ಬಸವಣ್ಣ ಉನ್ನತ ಹುದ್ದೆಯಾದ ಮಂತ್ರಿ ಪದವಿಯಲ್ಲಿದ್ದುಕೊಂಡು ಸಮಾಜ ಸುಧಾರಣೆಯಲ್ಲಿ ತೊಡಗಿ, ಬ್ರಾಹ್ಮಣ ಮೊದಲು, ಅಂತ್ಯಜ ಕೀಳು ಎಂಬ ನಂಬಿಕೆಗಳನ್ನು ಹೋಗಲಾಡಿಸಿ, ಒಂದು ಹೊಸ ಕ್ರಾಂತಿಯನ್ನು ಮಾಡುವುದರ ಮೂಲಕ ಕ್ರಾಂತಿಕಾರಿ ಎಂದೆನಿಕೊಂಡಿದ್ದಾನೆ. ಜಾತಿಯಿಂದ ವ್ಯಕ್ತ ದೊಡ್ಡವನಾಗುವುದಿಲ್ಲ. ತನ್ನ ಗುಣಗಳಿಂದ ವ್ಯಕ್ತಿ ದೊಡ್ಡವನಾಗುತ್ತಾನೆ ಎನ್ನುವುದನ್ನು ಬಸವಾದಿ ವಚನಕಾರರು, ಶರಣರು ಪ್ರತಿಪಾದಿಸಿದ್ದಾರೆ. ಹೀಗಾಗಿ ಭಕ್ತಿ ಚಳುವಳಿಯ್ಲಿ ಮಾದರ ಚನ್ನಯ್ಯ, ಡೋಹರ ಕಕ್ಕಯ್ಯ, ಜೇಡರ ದಾಸಿಮಯ್ಯ, ಮಡಿವಾಳ ಮಾಚಯ್ಯ, ಅಂಬಿಗರ ಚೌಡಯ್ಯ, ಅರಳಯ್ಯ ಮುಂತಾದ ದಲಿತರು ತಮ್ಮ ಜಾತ್ಯಾತೀತ ಮನೋಭಾವದಿಂದ ತಮ್ಮ ಕಾಯಕದಿಂದ ದಾಸೋಹದಿಂದ ಸಮಾಜದಲ್ಲಿ ಉನ್ನತ ಸ್ಥಾನಕ್ಕೆ ಏರಿದವರು. ಇಂತಹವರ ಮೂಲದಿಂದ ೧೨ನೇ ಶತಮಾನದ ಹೊತ್ತಿಗೆ ಶೂದ್ರರು, ಪಂಚಮರು ಸಮಾಜದಲ್ಲಿ ಒಳ್ಳೆಯ ಜೀವನ ನಿರ್ವಹಿಸುವುದಕ್ಕೆ ಸಾಧ್ಯವಾಯಿತು. ಒಳ್ಳೆಯ ಬದುಕನ್ನು ಕಟ್ಟಿಕೊಳ್ಳವ ಹಾಗೂ ಬದುಕಿನ ಹೊಸ ತಾತ್ವಿಕತೆಯನ್ನು ರೂಪಿಸಿದ ವಚನಕಾರರು, ಶರಣರು ತಮ್ಮ ಕ್ರಾಂತಿಕಾರಿ ಮನೋಭಾವದಿಂದ, ಚಿಂತನೆಗಳಿಂದ ಬದುಕನ್ನು ಹೊಸದಾಗಿ ಕಟ್ಟಲು ಪ್ರಯತ್ನಿಸಿದರು. ಅದರ ಭಾಗವಾಗಿ ತಮ್ಮ ಭಾವನೆಗಳನ್ನು ಹಾಗೂ ವಿಚಾಗಳನ್ನು ವ್ಯಕ್ತಪಡಿಸಲು ಬರೆದರು. ಈ ವಚನ ರೂಪವು ಬಹಳ ವಿಶಿಷ್ಟ ರೀತಿಯಿಂದ ರೂಪಗೊಂಡಿತ್ತು. ಜೈನರು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದರು ನಿಜ. ಆದರೆ ಅವರ ಸಾಹಿತ್ಯ ಶ್ರೀಸಾಮಾನ್ಯರನ್ನು ಒಳಗೊಂಡಿರಲಿಲ್ಲ ಮತ್ತು ಸ್ತ್ರೀ ಸಾಮಾನ್ಯರನ್ನು ಒಳಗೊಂಡಿರಿಲಿಲ್ಲ. ವಿದ್ವಜ್ಜನರು ವಿದ್ವಜ್ಜನರಿಗಾಗಿ ಸಾಹಿತ್ಯ ರಚಿಸುತ್ತಿದ್ದರು. ಆದರೆ ವಚನಕಾರರು ಸಾಮಾನ್ಯರಿಗಾಗಿ ಸಾಮಾನ್ಯರು ಒಳಗೊಳ್ಳುವಂತೆ ಸಂವಹನ ಸಾಧ್ಯವಾಗದಂತೆ ವಚನಗಳನ್ನು ರಚಿಸಿದರು. ವಚನ ರಚನೆ ಮತ್ತು ಬದುಕಿನ ರಚನೆ ಎರಡೂ ಬೇರೆ ಬೇರೆಯಾಗಿ ಕಂಡವರಲ್ಲ. ಹಾಗಾಗಿ ಈ ಚಳುವಳಿ ಬಹಳ ಕ್ರಾಂತಿಕಾತಿಯಾಗಿ ಪ್ರಸಿದ್ಧವಾಗಿದೆ. ವಚನಗಳು ಕೇವಲ ಸಾಹಿತ್ಯ ಪ್ರಕಾರಗಳಲ್ಲಿ ಒಂದಾಗದೆ ಶ್ರೇಷ್ಟ ಸಾಹಿತ್ಯವಾಗಿ ನಿಂತಿವೆ.

## ಅಧ್ಯಯನದ ಉದ್ದೇಶ

ಸಮಾಜವನ್ನು ಮತ್ತು ಸಮಾಜದಲ್ಲಿರುವ ಕೆಳವರ್ಗ ಮತ್ತು ಶೂದ್ರರನ್ನು ಸುಧಾರಿಸುತ್ತ ಎಚ್ಚರಿಸುತ್ತ ಜಾತ್ಯಾತೀತ ಸಮಾಜವನ್ನು ಕಟ್ಟುತ್ತಾ ಸ್ತ್ರೀ ಸಮಾನತೆಯನ್ನು ಪ್ರತಿಪಾದಿಸುತ್ತಾ ಹೊಸ ವಿಚಾರಗಳನ್ನು ಬದುಕಿನೊಂದಿಗೆ ರೂಪಿಸಿಕೊಂಡ ವಚನ ಸಾಹಿತ್ಯ ಚಳುವಳಿ ಒಂದು ಅಪರೂಪವಾದದ್ದು. ಹನ್ನೆರಡನೇ ಶತಮಾನದ ಪೂರ್ವದಲ್ಲಿ ಜೈನರು ಅಥವಾ ಇನ್ನಿತರರು ರಾಮಾಯಣ, ಮಹಾಭಾರತ ಮತ್ತು ಇತರ ಪುರಾಣಗಳನ್ನು ರಚಿಸಿದರು. ಅದರ ಕಥಾವಸ್ತು, ಅದರ ನಾಯಕರು, ನಾಯಕೀಯರು ಮಹಾನ ಪರಂಪರೆಯನ್ನು ಹೊಂದಿದವರು. ಕವಿಗಳು ಅಂತವರ ಚರಿತ್ರೆಯನ್ನು ಬರೆದು ಕೇವಲ ಪಂಡಿತರಿಗಾಗಿ, ರಾಜನನ್ನು ಓಲೈಸುವುದಕ್ಕೆ ಪ್ರಯತ್ನಿಸುತ್ತಿದ್ದರು. ಇದಕ್ಕೆ ತದ್ವಿರುದ್ಧವಾಗಿ ವಚನಕಾರರು ರಾಮಾಯಣ,

ಮಹಾಭಾರತ ಹಾಗೂ ಪುರಾಣ ಕಥೆಗಳನ್ನು ಕೈಬಿಟ್ಟರು. ಬದುಕಿನ ಒಳಗಿನಿಂದ ಹುಟ್ಟುವ ಅನುಭವಗಳು ಚಿಂತನೆಗಳಾಗಿ ವಚನಗಳ ರೂಪದಲ್ಲಿ ಪ್ರಕಟವಾದವು. ಭಕ್ತಿಯ ನೆಲೆಯಲ್ಲಿ ತಮ್ಮ ಆರಾಧ್ಯ ದೈವವಾದ ಇಷ್ಟಲಿಂಗದ ಜೊತೆ ನಡೆಸುವ ಸಂವಾದ ವ್ಯಕ್ತಿಗತವಾಗಿಯೂ, ಸಾಮಾಜಿಕವಾಗಿಯೂ, ಮಹತ್ವದ್ದಾಗಿ ಇರುತ್ತಿತ್ತು. ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು, ಚನ್ನಬಸವಣ್ಣ, ಆಯ್ದಕ್ಕಿ ಅಕ್ಕಮ್ಮ, ಮಾರಯ್ಯ, ಮುಕ್ತಾಯಕ್ಕ, ಅಂಬಿಗರ ಚೌಡಯ್ಯ, ಅರಳಯ್ಯ ಮುಂತಾದ ಶರಣ, ಶರಣೆಯರು ತಮ್ಮ ಉತ್ಕಟ ಭಾವನೆಯನ್ನು ವಚನಗಳಲ್ಲಿ ಅಭಿವ್ಯಕ್ತಿಸಿದ್ದಾರೆ. ೨೦ನೇ ಶತಮಾನದ ಭಾವಗೀತೆಗಳಿಗೆ ನೆಲೆ ಒದಗಿಸಿದ್ದು, ಹನ್ನೆರಡನೇ ಶತಮಾನದ ವಚನಗಳೆಂದರೆ ತಪ್ಪಾಗುವುದಿಲ್ಲ.

ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು ಮುಂತಾದ ಶರಣರು ತಮ್ಮ ಅಂತರಂಗವನ್ನು ಒಳಹೊರಗೂ ಎಂಬ ಬೇಧವಿಲ್ಲದೆ, ಮನಸ್ಸಿನ ಸ್ಥಿತಿಯನ್ನು ಪ್ರಕಟಿಸಿದ್ದಾರೆ. ಒಂದು ಚಳುವಳಿಯಲ್ಲಿದ್ದ ಇವರ ಮನಸ್ಥಿತಿ ವೈಯಕ್ತಿಕತೆಯನ್ನು ಮೀರಿ ಸಮಾಜದ ಒಳಿತಿಗಾಗಿ ಆಲೋಚಸಿದ ಚಿಂತನೆಗಳಾಗಿವೆ ಹೊರತು ಮನಸ್ಸಿನ ತುಮುಲ, ಆತಂಕ, ತಲ್ಲಣ, ತುಡಿತ ಅಸಹಜವಾಗಿ ಅಭಿವ್ಯಕ್ತಿಗೊಂಡಿಲ್ಲ. ತಮ್ಮ ಅಂತರಂಗ ಶೋಧನೆ ಮಾಡಿಕೊಂಡ ವಚನಕಾರರಲ್ಲಿ ಬಸವಣ್ಣನವರು ಎದ್ದುಕಾಣುತ್ತಾರೆ. ಈ ಅಂತರಂಗ ಶೋಧದ ಸ್ವರೂಪವನ್ನು ಅಧ್ಯಯನ ಮಾಡುವುದರಿಂದ ಭಕ್ತಿಯ ನೆಲೆ ಮತ್ತು ಸಾಮಾಜಿಕ ನೆಲೆಯಲ್ಲಿ ಅಭಿವ್ಯಕ್ತಿಯ ವಿಧಾನದ ಮಹತ್ವವನ್ನು ಅರಿಯುವ, ಶೋಧಿಸುವ ಉದ್ದೇಶದಿಂದ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## ಅಧ್ಯಯನದ ಮಹತ್ವ

ಬಸವಣ್ಣನವರು ಮೂಲತಃ ಸಮಾಜವಾದಿ ಚಿಂತಕರು. ಭಕ್ತನಾಗಿ, ಸಮಾಜವಾದಿಯಾಗಿ, ಸಮಾಜ ಸುಧಾರಕನಾಗಿ ಮತ್ತು ವ್ಯಕ್ತಿ ವಿಶಿಷ್ಟತೆಯನ್ನು ಕೂಡ ಹೊಂದಿದ್ದಾರೆ. ಸಮಾಜ ಕೇಂದ್ರಿತ ಚಿಂತನೆಗಳನ್ನು ಮಾಡುವ ಬಸವಣ್ಣ ಒಂದು ಚಳುವಳಿಯ ನಾಯಕನಾಗಿ ಆಂದೋಲನದಲ್ಲಿ ಸಕ್ರೀಯವಾಗಿ ಭಾಹವಹಿಸುವ ಯಾವುದೇ ನಾಯಕ ತನ್ನ ಅಂತರಂಗ ಮತ್ತು ಬಹಿರಂಗದಲ್ಲಿ ಭಿನ್ನತೆಯನ್ನು ಉಳಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಇದು ನನ್ನ ವೈಯಕ್ತಿಕ ವಿಚಾರ ಎಂದು ಹೇಳುವುದು ಕೂಡ ನಾಯಕನಾಗಿ, ಸಮಾಜ ಕೇಂದ್ರಿತ ಚಿಂತಕನಾಗಿ ಆಲೋಚಿಸುವಾಗ ತದ್ವಿರುದ್ಧವಾದ ಚಿಂತನೆಗಳು, ಅಂತರಂಗದಲ್ಲಿ ಬಹಿರಂಗದಲ್ಲಿ ಎಂದು ವ್ಯತ್ಯಾಸ ಮಾಡಿಕೊಳ್ಳದ ಬಸವಣ್ಣನವರು ತಮ್ಮ ಮನಸ್ಥಿತಿಯನ್ನು ಮುಚ್ಚುಮರೆಯಿಲ್ಲದೆ ಹೇಳಿಕೊಂಡಿದ್ದಾರೆ. ಇಂತಹ ಅಂತರಂಗದ ತುಮುಲವನ್ನು, ತುಡಿತ, ಮಿಡಿತ, ಆತಂಕ ಬಾವನೆಯನ್ನು ಅಂತರಂಗ ಶೋಧಿಸುವ ಮೂಲಕ ಅಧ್ಯಯನ ಮಾಡುವುದು ಮಹತ್ವದ್ದೆಂದು ತೋರುತ್ತದೆ.

## ಅಧ್ಯಾಯನದ ವ್ಯಾಪ್ತಿ

ವಚನ ಚಳುವಳಿಯಲ್ಲಿ ತೊಡಗಿಕೊಂಡ ಅನೇಕ ವಚನಕರರು ತಮ್ಮ ಅಂತರಂಗದ ಮಾತುಗಳನ್ನು ಮುಚ್ಚಿಟ್ಟುಕೊಳ್ಳದೆ ಅಭಿವ್ಯಕ್ತಿಸಿದ್ದಾರೆ. ಇಂಥವರಲ್ಲಿ ಬಸವಣ್ಣನವರು ಪ್ರಮುಖರು. ಅವರ ವಚನಗಳಲ್ಲಿ ಕಾಣುವ ಭಾವನಾತ್ಮಕವಾದ, ನಿಷ್ಠುರತೆಯಿಂದ ಕೂಡಿದ, ನಿವೇದನೆಗಳಿಂದ ತುಂಬಿದ ವಚನಗಳು ಬಸವಣ್ಣನವರ ಅಂತರಂಗದ ಚಿಂತನೆಗಳಾಗಿ ನಮಗೆ ಗೋಚರಿಸುತ್ತವೆ. ಇಂತಹ ವಚನಗಳು ಕೇವಲ ಭಾವನಾತ್ಮಕ ನೆಲೆಯಲ್ಲಿರದೆ ಅವು ಅನೇಕ ನೆಲೆಯಲ್ಲಿ ಭಕ್ತಿಯ ನೆಲೆಯಲ್ಲಿ, ರಾಜಕೀಯ ನೆಲೆಯಲ್ಲಿ, ಕೌಟುಂಬಿಕ ನೆಲೆಯಲ್ಲಿ, ಧಾರ್ಮಿಕ ನೆಲೆಯಲ್ಲಿ ಅವು ಪ್ರಕಟವಾಗಿದ್ದರೂ ಅವುಗಳಲ್ಲಿ ಬಸವಣ್ಣನ ಅಂತರಂಗದ ಶುದ್ಧತೆ ಕಾಣುತ್ತದೆ. ಅಂರಂಗದ ಶುದ್ಧತೆಯ ಒಳಗೆ ಆತನ ತುಮುಲವು ಬಿಕ್ಕಟ್ಟುಗಳು, ನಿಷ್ಠುರತೆಗಳು ಕಾಣುತ್ತವೆ. ಇಂತಹ ಹತ್ತಾರು ವಚನಗಳನ್ನು ಈ ಅಧ್ಯಯನದ ವ್ಯಾಪ್ತಿಯೊಳಗೆ ಚರ್ಚಿಸಲಾಗುವುದು.

## ಅಧ್ಯಯನದ ಸ್ವರೂಪ

ಆಯ್ದುಕೊಂಡ ವಿಷಯಕ್ಕೆ ಅನುಗುಣವಾಗಿ ವಚನ ಚಳುವಳಿ ಅದರ ಮಹತ್ವ ಅದರ ನಾಯಕನಾಗಿರುವ ಬಸವಣ್ಣ ಮತ್ತು ಆತನ ವ್ಯಕ್ತತ್ವವನ್ನು ಅರಿಯುವ, ಗ್ರಹಿಸುವ ನಿಟ್ಟಿನಲ್ಲಿ ಈ ಅಧ್ಯಯನ ನಡೆದಿರುತ್ತದೆ. ಜೊತೆಗೆ ಅಧ್ಯಯನ ವ್ಯಾಪ್ತಿಯಲ್ಲಿರುವ ವಚನಗಳನ್ನು ವಸ್ತುವಿಷಯ ಮತ್ತು ಅಭಿವ್ಯಕ್ತಿ ವಿಧಾನವನ್ನು ವಿಶ್ಲೇಷಿಸುವ ವ್ಯಾಖ್ಯಾನಿಸುವ ಪ್ರಯತ್ನ ಮಾಡಲಾಗುವುದು. ವಚನ ರೂಪದ ವಿಶಿಷ್ಟತೆ ಮತ್ತು ಬಸವಣ್ಣನ ವಚನಗಳ ವಿನ್ಯಾಸವನ್ನು ಅಧ್ಯಯನ ಮಾಡುವುದು ಈ ಅಧ್ಯಯನದಲ್ಲಿ ಅಳವಡಿಸಿಕೊಂಡಿರುವ ವಿಧಾನ. ಅಂತರಂಗ ಶೋಧನೆ ಎಂಬ ವಿಷಯವಿದ್ದರು ಇದರಲ್ಲಿ ಅಪಾರವಾಗಿರುವ ಸಾಮಾಜಿಕತೆ, ಧಾರ್ಮಿಕತೆ, ರಾಜಕೀಯತೆ, ಆರ್ಥಿಕತೆಯ ನೆಲೆಯಲ್ಲಿ ವಿಭಾಗಿಸಿ ಗ್ರಹಿಸುವುದು ಅಧ್ಯಯನದ ಅನುಕೂಲಕ್ಕಾಗಿ ಮಾಡಿಕೊಂಡಿದ್ದರು ಬಸವಣ್ಣನವರ ಒಟ್ಟು ಚಿಂತನೆಯ ಸ್ವರೂಪವನ್ನು ಗ್ರಹಿಸುವುದು ಇಲ್ಲಿ ಮುಖ್ಯವಾಗಿದೆ.

ಅಧ್ಯಾಯ-೨

# ವಚನ ಚಳುವಳಿಯ ತಾತ್ವಿಕ ಸ್ವರೂಪ

ಭಾರತದ ಇಂದಿನ ಸಾಮಾಜಿಕ, ಧಾರ್ಮಿಕ ರಾಜಕೀಯ ಸನ್ನಿವೇಶವು. ಅದು ಎಷ್ಟೇ ಆಧುನಿಕ ವೇಷವನ್ನು ತೊಟ್ಟು, ಆರ್ಥಿಕವಾಗಿ ಬೆಳೆದು ಜಾಗತೀಕ ಜಗತ್ತಿನಲ್ಲಿ ಮುಂದುವರೆದಿದ್ದರೂ, ಸಾವಿರಾರು ವರ್ಷಗಳ ಹಿಂದಿನ ಎಲ್ಲಾ ಸಾಮಾಜಿಕ ವಿಷಮತೆಗಳನ್ನು ತನ್ನ ಹೊಟ್ಟೆಯಲ್ಲಿ ಇನ್ನಷ್ಟು ಗಾಢವಾಗಿ ಇರಿಸಿಕೊಂಡಿದೆ, ಧಾರ್ಮಿಕ ಅಸಹನೆ ಚರಿತ್ರೆಯನ್ನು ನಾಚಿಸುತ್ತದೆ, ಜಾತಿಸೂತಕ, ಲಿಂಗ ತಾರತಮ್ಯಗಳನ್ನು ನಿರಾಕರಿಸಿ ಸ್ವಾತಂತ್ರ್ಯಕ್ಕಾಗಿ ಸಮಾನತೆಗಾಗಿ ಹಂಬಲಿಸುತ್ತಿರುವ, ಹೋರಾಟ ಮಾಡುತ್ತಿರುವ ಜನ ಸಮುದಾಯಗಳ ಬಗ್ಗೆ ಸ್ಥಾಪಿತ ಹಿತಾಸಕ್ತಿಗಳಿಗೆ ಅಸಹನೆ, ಹೆಚ್ಚುತ್ತಿದೆ.

ಇಂತಹ ಅಲವು ವೈರುದ್ಯಗಳಿಂದ ಕೂಡಿದ ಭಾರತದ ಸಾಮಾಜಿಕ, ಧಾರ್ಮಿಕ, ಸಾಂಸ್ಕ್ರತಿಕ ಬದುಕನ್ನು ಅದರ ಚಾಯತಾರ್ಥದಲ್ಲಿ ಒಪ್ಪಲು ನಿರಾಕರಿಸಿದ ಹಲವು ಸುಧಾರಣವಾದಿಗಳು, ಧಾರ್ಮಿಕ ವ್ಯಕ್ತಿಗಳು, ಅನುಭವಿಗಳು, ಸಂತರು, ಶರಣರು, ಅದನ್ನು ತಮ್ಮದೆ ಆದ ರೀತಿಯಲ್ಲಿ ವಿರೋಧಿಸಿದ್ದಾರೆ, ಜೊತೆಗೆ ಬದಲಾಯಿಸುವ ಪ್ರಯತ್ನವನ್ನು ಮಾಡಿದ್ದಾರೆ. ಮಹಾವೀರ, ಬುದ್ಧ, ಅವಧೂತರು, ಸೂಫಿಗಳು, ಸಂತರು, ಶರಣರು ಹೀಗೆ ಪ್ರಾಚೀನ ಹೋರಾಟಗಾರರ ಜೊತೆಗೆ, ಗಾಂಧಿ, ಅಂಬೇಡ್ಕರ್ ಮುಂತಾದವರು ಸೇರುತ್ತಾರೆ. ಇಂತವರ ಸಾಲಿನಲ್ಲಿ ಹನ್ನೆರಡೆನೆಯ ಶತಮಾನದಲ್ಲಿ ಬಂದ ಬಸವಣ್ಣನವರಿಗೆ ವಿಷೇಶವಾದ ವಿಶಿಷ್ಟವಾದ ಸ್ಥಾನವಿದೆ. ಬಸವಣ್ಣನವರು ಕಲ್ಯಾಣನಗರವನ್ನು ಕಾರ್ಯ ಕ್ಷೇತ್ರವನ್ನಾಗಿ ಮಾಡಿಕೊಂಡಿದ್ದರೂ, ಇಡೀ ಭಾರತದುದ್ದಕ್ಕೂ ಸಾಂಸ್ಕೃತಿಕ ಚಳುವಳಿಯ ಬಿಸಿಯು ಆರದೇ ನಿಲ್ಲಬಲ್ಲ ಶಕ್ತಿಯನ್ನು ಹೊಂದಿತ್ತು.

ಕನ್ನಡ ನಾಡಿನ ಸಾಂಸ್ಕೃತಿಕ, ಸಾಹಿತ್ಯೀಕ, ಸಾಮಾಜಿಕ, ರಾಜಕೀಯ, ಧಾರ್ಮಿಕ ಲೋಕದಲ್ಲಿ ಪ್ರಜ್ವಲ ಮಾನವಾಗಿ ಬೆಳಗಿದ ಮಿಂಚಿನಂತೆ ಮಿನುಗಿ ಮಾಯವಾದವರು ಬಸವಣ್ಣನವರು. ಮತ್ತು ಶರಣರ ಕ್ರಾಂತಿ ಅವರ ವಿಚಾರಧಾರೆಗಳು, ನಮಗೆ ತೋರಿದರೂ ಬಸವಣ್ಣನ ಬೆಳವಣಿಗೆ, ನಿರ್ಧಾರ ನಿರ್ಣಯಗಳು, ಅವರ ಬದುಕಿನಲ್ಲಿ ನಡೆದ ಹೋರಾಟಗಳು

ಸಹಜವೇ ಆಗಿರುವಂತೆ ಕಾಣುತ್ತದೆ. ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ಶರಣ ಸಮುದಾಯವು ನಡೆಸಿದ ಕಲ್ಯಾಣ ಚಳುವಳಿ, ವಚನ ಚಳುವಳಿಯು ಭಾರತದ ಇತಿಹಾಸದಲ್ಲಿಯೇ ಸ್ಮರಣೀಯ ಸ್ಥಾನದಲ್ಲಿ ನಿಲ್ಲುತ್ತದೆ. ವೈದಿಕ ಹಾಗೂ ಇತರ ಪರಂಪರೆಗಳಿಗೆ ಸವಾಲಾಗಿ ಹೊಸ ಸಮಾಜದ ಹುಟ್ಟಿಗೆ ಬಸವಣ್ಣನವರ ನೇತೃತ್ವದ ಶರಣರ ಚಳುವಳಿ ಕಾರಣವಾಯಿತು. ಸಮಾಜೋಧಾರ್ಮಿಕವಾಗಿ ಈ ಚಳುವಳಿಯ ಸ್ವರೂಪ ತಿಳಿಯಬೇಕಾದರೆ ಪ್ರಾಚೀನ ಕರ್ನಾಟಕದ ಅಂದಿನ ಸಂದರ್ಭವನ್ನು ತಿಳಿಯಬೇಕಾಗುತ್ತದೆ.

ಪ್ರಾಚೀನ ಕಾಲದಿಂದಲೂ, ಭಾರತದ ಸಮಾಜದಲ್ಲಿ ವರ್ಣ ವ್ಯವಸ್ಥೆಯು ಏಣಿ ಶ್ರೇಣಿ ಸ್ವರೂಪ ಹೊಂದಿರುವಂತಹದ್ದಾಗಿತ್ತು, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಎಂಬ ಚಾತುವರ್ಣ ಪದ್ಧತಿಯಲ್ಲಿ, ಅಸ್ಪೃಶ್ಯನೆನಿಸಿದ ಪಂಚಮನು, ಈ ವ್ಯವಸ್ಥೆಯಲ್ಲಿ ಅಡಿಯಾಳಾಗಿ ಭೂದೈವವೆನಿಸಿದ ಬ್ರಾಹ್ಮಣ ಒಡೆಯನಾಗಿದ್ದಾನೆ.

ಈ ಎರಡು ತುದಿಗಳ ಮಧ್ಯೆ ಹಲವಾರು ಸ್ತರಗಳಿದ್ದು, ನೂರಾರು ಕಸುಬುಗಳಿದ್ದು, ನೂರಾರು ಕಸಬುಗಳಲ್ಲಿ ತೊಡಗಿಸಿಕೊಂಡ ಸಾವಿರಾರು ಜಾತಿಗಳು ಇವೆ. ಈ ಒಂದೊಂದು ಜಾತಿ ಜನಾಂಗವು ತಮ್ಮದೇ ಆದ ದೈವ ತಮ್ಮದೇ ಆದ ಆಚಾರ-ವಿಚಾರ, ಆಚರಣೆಗಳು ನಂಬಿಕೆಗಳನ್ನು ಒಳಗೊಂಡಿದ್ದು, ಸಾಮಾಜಿಕವಾಗಿ ಅದರದೇ ಸ್ಥಾನಮಾನಗಳನ್ನು ಹೊಂದಿದೆ. ವಿವಾಹಗಳು ಊಟೋಪಚಾರಗಳು ಆಯಾ ಜಾತಿ ಜನಾಂಗಗಳಲ್ಲಿಯೇ ನಡೆಯಬೇಕು, ಆಯಾ ಜಾತಿಗಳಿಗೆ ತಕ್ಕ ಕಸಬುಗಳು ಅವರವೆ ಆಗಿದ್ದವು. ಇಂತಹ ಕಸಬುಗಳಿಂದ ಆಯಾ ಜಾತಿಯ ಶ್ರೇಷ್ಠತೆಯು ನಿರ್ಧಾರವಾಗುತ್ತಿತ್ತು ಚರ್ಮದಿಂದ ಚಪ್ಪಲಿ ಮಾಡುವ ಕಸುಬಿನವರನ್ನು ಚಮ್ಮಾರರೆಂದು. ಗುರುತಿಸಲಾಗುತ್ತಿತ್ತು. ಇಲ್ಲಿ ನಾವು ಮುಖ್ಯವಾಗಿ ಕೇವಲ ಶ್ರಮ ವಿಭಜನೆಯನ್ನು ಕಾಣಬಹುದೇ ಹೊರತು ಶ್ರಮ ಗೌರವವನ್ನಲ್ಲ. ಇಲ್ಲಿ ವೃತ್ತಿಗೆ ಗೌರವ, ಸಮಾನತೆ ಎಂಬುದೇ ಇಲ್ಲ. ಇಂತಹ ಅಸಮಾನ ವೃತ್ತಿಯಿಂದ ಹುಟ್ಟಿದ ಜಾತಿಗಳಲ್ಲಿ, ಅದೇ ಅಸಮಾನತೆಯು ಮುಂದುವರೆಯಿತು. ಈ ರೀತಿಯ ಸಮಾಸತೆಯಿಲ್ಲದ ಜಾತಿಗಳಲ್ಲಿ ಹುಟ್ಟಿದವರೆಲ್ಲರು ಸಮಾನತೆಗೆ ಅರ್ಹರಲ್ಲ ಎಂಬ ಮನೋಧರ್ಮ ಬೆಳೆದುಬಿಟ್ಟಿತು, ಜಾತಿ ಸಂಕರದ ಜೊತೆಗೆ ಲಿಂಗತಾರತಮ್ಯವು ನೆಲೆನಿಂತಿತ್ತು. ಕೇವಲ ಮನುಷ್ಯನ ಹುಟ್ಟಿನ ಮೂಲದಿಂದ ಬರುವ ಜಾತಿಸೂತಕವು ಮನುಷ್ಯ ಮನುಷ್ಯರ ಮಧ್ಯೆ ತಾರತಮ್ಯಕ್ಕೆ ಕಾರಣವಾದಂತೆ, ಆ ಮನುಷ್ಯರು ಗಂಡೋ ಹೆಣ್ಣೋ ಎಂಬುದು ಮುಖ್ಯವಾಯಿತು, ಗಂಡಿಗೆ ಮಾತ್ರ ಅದರಲ್ಲೂ ಉನ್ನತ ಸ್ಥರದಲ್ಲಿ ಹುಟ್ಟಿದ ಗುಂಪಿಗೆ ಸೇರಿದವರಿಗೆ ಮಾತ್ರ ಮೋಕ್ಷವೆಂದು ತಿಳಿದ ವೈದಿಕ ಪರಂಪರೆಯ ಕರಿನೆರಳು ಗಂಡು-ಹೆಣ್ಣುಗಳ ಸಮಾನತೆಯನ್ನು ಮಸುಕು ಮಾಡಿತು. ಸಮಾಜದ ಈ ದ್ವಿಮುಖ ನೀತಿಯಿಂದಾಗಿ ಯಾವತ್ತು ಹೆಣ್ಣು ಗಂಡಿಗೆ ಸಮಾನಳಲ್ಲವೆಂದು ಅವಳು ಗಂಡಿನ ಮೊಕ್ಷಸಾಧನೆಗೆ ಅಡ್ಡಿಯೆಂದು ಭಾವಿಸಲಾಯಿತು. ಹೆಣ್ಣು ಒಂದು ಮಾಯೆ ಎಂದು ಜರಿದು ಕೆಳಸ್ತರದ ವರ್ಗದವರಿಗಿಂತಲೂ ಕಡೆಯಾಗಿ ಕಾಣಲಾಗುತ್ತಿತ್ತು.

ವೈದಿಕ ಪರಂಪರೆಯು ಜಾತಿ ಪದ್ಧತಿಯನ್ನು, ಮನುಷ್ಯ ಮನುಷ್ಯರ ಮಧ್ಯದ ಲಿಂಗ ತಾರತಮ್ಯವನ್ನು ಒಪ್ಪಿ ಮಾನ್ಯ ಮಾಡಿದ್ದವು, ಸಾಮಾಜಿಕ, ರಾಜಕೀಯ, ಆರ್ಥಿಕ

ಅಸಮಾನತೆಯುಳ್ಳ ಸಮಾಜದಲ್ಲಿ ಶಿಕ್ಷಣವು ಕೆಲವೇ ವರ್ಗಗಳಿಗೆ, ಜಾತಿಗಳಿಗೆ ಮೀಸಲಾಯಿತು, ಹಕ್ಕಿನ ವಿಷಯವಾಯಿತು. ಸಾಮಾನ್ಯರಿಗೆ ಇತರ ಕೆಳ ಮಟ್ಟದೆಂದು ಗುರುತಿಸಲ್ಪಡುವ ಜಾತಿ ಜನಾಂಗಗಳಿಗೆ. ಹೆಣ್ಣು ಮಕ್ಕಳಿಗೆ ಶಿಕ್ಷಣ, ಜ್ಞಾನ, ವಿದ್ಯೆ ಆರ್ಥಿಕ ಸ್ವಾತಂತ್ರ್ಯ ಸಾಮಾಜಿಕ ಸ್ವಾತಂತ್ರ್ಯ, ಧಾರ್ಮಿಕತೆಯ ಸ್ವಾತಂತ್ರ್ಯ ಸಿಗದ ಪರಿಸ್ಥಿತಿ ನಿರ್ಮಾಣವಾಗಿತ್ತು.

ಇಂತಹ ಅಕ್ಷರದಿಂದ, ಜ್ಞಾನದಿಂದ ದೂರ ಉಳಿದ ಸಾಮಾನ್ಯ ಜನರು ಬಹುಸಂಖ್ಯಾತರಾಗಿದ್ದರು. ಮುಂದುವರಿದ ಜನಾಂಗದ ಹಿತಾಸಕ್ತಿಗಳಿಗೆ ಅಂದರೆ ಬ್ರಾಹ್ಮಣ, ಕ್ಷತ್ರಿಯರ ಹಿತಾಸಕ್ತಿಗೆ ಬಲಿಯಾಗಿ ಮೂಢನಂಬಿಕೆಗಳನ್ನೆ ಜೀವನವನ್ನಾಗಿಸಿಕೊಂಡಿದ್ದರು. "ರಾಜಂ ಪ್ರತ್ಯಕ್ಷ ದೇವತಾ" ಬ್ರಾಹ್ಮಣರು "ಭೂಸುರರು" ಮುಂತಾದ ಅಸಮಾನತೆಯನ್ನು ಸೃಷ್ಟಿಸಿ, ಪುಷ್ಟಿಕರಿಸುವ ನುಡಿಗಟ್ಟುಗಳು ಹುಟ್ಟಿಕೊಂಡು ಪುರೋಹಿತವರ್ಗವುದ ಏಳಿಗೆಗಾಗಿ ಶ್ರಮಿಸತೊಡಗಿತು. ಪುರೋಹಿತಶಾಹಿ ವರ್ಗವುತಾನೇ ಸೃಷ್ಟಿಸಿದ್ದ ಅಸಮಾನತೆಯನ್ನು ಸಾರುವ ಶಾಸ್ತ್ರ ಪುರಾಣ ಆಗಮಗಳನ್ನು ಪ್ರಮಾಣ ಗ್ರಂಥಗಳೆಂದು ಪ್ರಚಾರಮಾಡಿ ಬಹುಜನರನ್ನು ಅಜ್ಞಾನರನ್ನಾಗಿಸಿ ಅಂಧಕಾರದಲ್ಲಿಟ್ಟು ಶೋಷಣೆ ಮಾಡುವುದರ ಮೂಲಕ ತಮ್ಮ ಆಧೀನದಲ್ಲಿಟ್ಟುಕೊಳ್ಳುವ ಕಾರ್ಯದಲ್ಲಿ ಯಶಸ್ವಿಯಾಗಿದ್ದರು. ಹೀಗೆ ಪ್ರಭುತ್ವವು ಮೇಲ್ವರ್ಗವು ಪುರೋಹಿರವರ್ಗವು ತಮ್ಮ ಹಿತಕ್ಕಾಗಿ ಹಿಂದುಳಿದ ವರ್ಗಗಳನ್ನು ದುಡಿಸಿಕೊಂಡು ಆಯಾದ ಜೀವನ ಸಾಗಿಸುತ್ತಾ ದುಡಿಯದೆ ಫಲವುಂಡು ತೇಗುತ್ತಿತ್ತು.

ಇಂತಹ ಶಿಷ್ಟ ಪರಂಪರೆಯಲ್ಲಿ ವೈದಿಕ, ಜೈನ, ಬೌದ್ಧ ಸಂಸ್ಕೃತಿಗಳು ಸೇರುತ್ತವೆ. ತಾತ್ವಿಕವಾಗಿ ವೈದಿಕ ಧರ್ಮವನ್ನು ನಿರಾಕರಿಸಿ ಜೈನ, ಬೌದ್ಧ ಧರ್ಮಗಳು ಹುಟ್ಟಿಕೊಂಡವು. ಒಂದು ಕಾಲಕ್ಕೆ ಜನಪ್ರಿಯತೆಗಳಿಸಿ ಕೊಂಡಿದ್ದರು. ಕಾಲ ಕ್ರಮೇಣ ದುರ್ಬಲಗೊಂಡವು ಬೌದ್ಧ ಸಂಸ್ಕ್ರತಿಕಯು ಜಾತಿ ಲಿಂಗ ತಾರತಮ್ಯಗಳನ್ನು ಮೀರಿ ಜನರ ಪ್ರೀತಿಯನ್ನು ಪಡೆದಿತ್ತು ಹಾಗೂ ತುಂಬಾ ಪ್ರಬಲವಾಗಿ ಭಾರತ ಮಾತ್ರದಲ್ಲದೆ ಇತರ ವಿದೇಶಗಳಲ್ಲಿಯು ಹೆಸರು ವಾಸಿಯಾಗಿತ್ತು, ಆದರೆ ಭಾರತದಲ್ಲಿ ವ್ಯವಸ್ಥಿತವಾಗಿ ವೈದಿಕ ಪರಂಪರೆಯ ಅದನ್ನು ಕೊಂದುಹಾಕುವಲ್ಲಿ ಯಶಸ್ವಿಯಾಯಿತೆಂದೇ ಹೇಳಬೇಕಾಗುತ್ತದೆ. ಹೀಗೆ ದುರ್ಬಲಗೊಂಡ ಬೌದ್ಧ, ಜೈನ ಪರಂಪರೆಯು ಜನರಿಂದ ದೂರವಾದವು. ಇದರಿಂದ ವೈದಿಕ ಪರಂಪರೆಯು ಸಮಾಜದ ಮೇಲೆ ತನ್ನ ಕದಂಬ ಬಾಹುಗಳನ್ನು ಇನ್ನಷ್ಟು ಬಿಗಿಗೊಳಿಸಿತು.

ಕುಲಕ್ಕೊಂದು, ಜಾತಿಗೊಂದು ದೇವರು, ನಂಬಿಕೆ ಆಚಾರವನ್ನು ರೂಢಿಸಿಕೊಂಡು ಬಂದ ಅಪಾರ ಜನಸಮುದಾಯವಿತ್ತು, ವೈದಿಕ ಧರ್ಮಕ್ಕೆ ವೇದಶಾಸ್ತ್ರ ಆಗಮಗಳ ಬಲವಾದ ಶಕ್ತಿದಾಯಕ ಬಲವಿತ್ತು. ಇನ್ನಿತರ ಕೆಳಜಾತಿಯ ಜನರಿಗೆ ತಮ್ಮ ತಮ್ಮದೇ ಆದ ನಂಬಿಕೆ ಆಚಾರ, ವಿಚಾರ, ಆಹಾರಗಳಿಗನುಗುಣವಾಗಿ ದೈವಗಳು, ದೇಸಿ ಪರಂಪರೆಗೆ ಸೇರಿದ ಆಚರಣೆಗಳು, ಮಾರಮ್ಮ, ಕೇತಯ್ಯ, ಬೀರಯ್ಯ, ಭೂತಪ್ಪ ಮತ್ತು ಮೊರ, ಕಲ್ಲು ಮುಂತಾದ ಕಲ್ಪನೆಯ ಆದರದ ಮೇಲೆ ದೈವ ಎಂದು ನಂಬಿ ಆರಾಧಿಸುತ್ತಿದ್ದರು. ಈ ರೀತಿಯಲ್ಲಿ ಇದ್ದರೂ ಸಹ, ಜನಸಾಮಾನ್ಯರು, ವೈದಿಕ ಪರಂಪರೆಯ ಹಿಡಿತಕ್ಕೆ ಸಿಕ್ಕಿಕೊಂಡವರಾಗಿದ್ದರು.

ವೈದಿಕ, ಜೈನ, ಬೌದ್ಧ, ಶೈವಧರ್ಮಗಳು ಶಿಷ್ಟ ಪರಂಪರೆಯಲ್ಲಿ ರೂಪಗೊಂಡು ಇವು ಕೇವಲ ಶ್ರೀಮಂತರು, ರಾಜರು, ಮೇಲ್ವರ್ಗ ಮತ್ತು ಮೇಲ್ಜಾತಿಯವರಲ್ಲಿ ಮಾತ್ರ ಹೆಚ್ಚು ಜನಪ್ರಿಯವಾಗಿದ್ದವು. ಸಾಮಾನ್ಯ ಮತ್ತು ಜೈನ ಬೌದ್ಧ ಧರ್ಮಗಳು ಸ್ವಲ್ಪಮಟ್ಟಿಗೆ ಸ್ವೀಕರಿಸಿ ಅದರಲ್ಲಿನ ವಿದಿವಿಧಾನಗಳ ಮುಳ್ಳನ್ನು ದಾಟಿ ಹೋಗಲು ಸಾಧ್ಯವಾಗಲಿಲ್ಲ ಈ ಎಲ್ಲಾ ಧರ್ಮಗಳು ಪ್ರಭುತ್ವದ ಕೃಪಾಪೋಷಿತ ಸಂಸ್ಥೆಯಾದುದರಿಂದ ಲಿಂಗತಾರತಮ್ಯ ಜಾತಿಯತೆ ತೊಡೆದು ಹಾಕಲು ಸಾಧ್ಯವಾಗಲ್ಲಿಲ್ಲ.

ವೇದ ಶಾಸ್ತ್ರಗಳನ್ನು ರಕ್ಷಿಸಲು ಹೊರಟಿದ್ದ ಶಿಷ್ಟ ಪರಂಪರೆಯ ಧರ್ಮಗಳಿಂದ ಜನಸಾಮಾನರಾದ ಬಹುಜನರ ಹಿತರಕ್ಷಣೆ ಸಾಧ್ಯವಿಲ್ಲವೆಂಬ ಅರಿವು ಶೋಷಿತ ಜನರಲ್ಲಿ ಮೂಡಿತು. ಜ್ಞಾನ ಮಾರ್ಗವೇ ಎಲ್ಲಾ ಸಾದಕ ಮಾರ್ಗಗಳಿಗಿಂತ ಶ್ರೇಷ್ಠವಾದುದು ಎಂಬ ವಾದವನ್ನು ಪ್ರಶ್ನಿಸುವ ಕಾಲಬಂದಿತು. ಅಂದಿನ ಸಮಾಜದ ಶೋಷಿತ ವರ್ಗವಾಗಿ ಬಹುಜನರನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ಭಕ್ತಿ ಮತ್ತು ಕಾಯಕ ಮಾರ್ಗದಿಂದ ಮಾತ್ರ ಎಲ್ಲರಿಗೂ ಮೋಕ್ಷ ಸಾಧ್ಯವೆಂದು ಸಾರಿದ ಭಕ್ತಿ ಪಂಥವು ಜನಸಾಮಾನ್ಯರ ಧರ್ಮವೆಂದಾಯಿತು. ಭಕ್ತಿಯ ಮೂಲಕ ದೇಹದಲ್ಲಿ ದೇವರನ್ನು ಕಾಣಲು ಸಾಧ್ಯ, ಗುರುವಿನ ನೆರವು ಅಗತ್ಯ, ಸಂಪೂರ್ಣ ಸಮರ್ಪಣೆ ಪರಮೋಚ್ಛ ಪೂಜೆಯೆಂಬುದು ಈ ಪಂಥದ ಬಹುಮುಖ್ಯವಾದ ತಿಳಿವು ಮತ್ತು ನಿಲುವಾಗಿತ್ತು . ಇದರ ನಿಲುವು ಜನಸಾಮಾನ್ಯರಿಗೆ ಸುಲಭವಾಗಿ ನಿಲುಕುವಂತಿತ್ತು ಹಾಗೂ ಇದರಿಂದ ಭಕ್ತಿಪಂಥವು ಬಹುಬೇಗ ಜನಪ್ರಿಯತಗಳಿಸಿತು.

ಭಾರತದಲ್ಲಿ ಭಕ್ತಿ ಪಂಥವು ಆರಂಭದಲ್ಲಿ ಕೆಲವು ರಾಜ್ಯಗಳಲ್ಲಿ ಕಂಡುಬರುತ್ತದೆ. ದಕ್ಷಿಣ ಭಾರತದಲ್ಲಿ ಮೊದಲಿಗೆ ತಮಿಳುನಾಡಿನಲ್ಲಿ ಬೆಳೆದುಬಂದಿತ್ತು, ಶೈವಸಂತರು ದಕ್ಷಿಣ ಭಾರತದಲ್ಲಿ ಭಕ್ತಿ ಪಂಥ ಬೆಳಸಿದವರಲ್ಲಿ ಮೊದಲಿಗರು. ಆದರೆ ಅದು ತಾತ್ವಿಕ ರೂಪ ಪಡೆದು ಅದೊಂದು ಸಿದ್ದಾಂತವಾಗಿ ವೈದಿಕ ಪರಂಪರೆಯ ಶಿಷ್ಟ ಸಂಸ್ಕೃತಿಗೆ ಪರ್ಯಾಯವಾಗಿ ಸಾಮಾಜಿಕ ಅಸಮಾನತೆಯ ವಿರುದ್ಧದ ಪ್ರತಿಭಟನೆಯಾಗಿ ರೂಪಗೊಂಡದ್ದು ಮಾತ್ರ ಕ್ರಿ.ಶ. ೧೧-೧೨ ನೇ ಶತಮಾನದ ಕಾಲವಧಿಯಲ್ಲಿ .ಈ ವರೆಗೆ ಜೈನ, ಬೌದ್ಧ, ವೈದಿಕ ಧರ್ಮಗಳು ಪ್ರಬಲಗೊಂಡಿದ್ದು ತನ್ನ ಶುಷ್ಕ ಆಚರಣೆಗಳೆಂದು, ಜನಸಾಮಾನ್ಯರಿಗೆ ಕಠಿಣವಾದ ಧರ್ಮಗಳಾಗಿ ಕಂಡದ್ದರಿಂದ ಕಾಲಕ್ರಮೇಣ ೧೧-೧೨ನೇ ಶತಮಾನದ ಹೊತ್ತಿಗೆ, ಕ್ಷಣಿಸುತ್ತಾ ದುರ್ಬಲದ ಕಡೆಗೆ ಸಾಗುತ್ತಾ ಇದ್ದವು ಜೊತೆಗೆ ಸರಳ, ಆಚಾರ ವಿಚಾರ, ಜಾತ್ಯಾತೀತತೆ, ಭಕ್ತಿ, ಕಾಯಕ, ದಾಸೋಹ ಎಂಬ ಮೂಲತತ್ವಗಳಡಿಯಲ್ಲಿ "ಸರ್ವರಿಗೆ ಸಮಬಾಳು ಸರ್ವರಿಗೆ ಸಮಪಾಲು" ಎಂಬಂತೆ ಏಕತೆಯ ಆಶಯವನ್ನೊಳಗೊಂಡು ಸಮಾನತೆಯ ತಿರುಳನ್ನು ಹೊಂದಿ ಲಿಂಗತಾರತಮ್ಯ ಬಿಟ್ಟು, ಹೆಣ್ಣು-ಗಂಡು ಎಂಬ ಭೇದ ಭಾವ ಇಲ್ಲದೆ ಇಬ್ಬರು ಸಮಾನರು. ಗಂಡಿನಷ್ಟೆ ಮಹತ್ವ ಹೆಣ್ಣಿಗಿದೆ ಯಾರು ಬೇಕಾದರು ಧಾರ್ಮಿಕವಾಗಿ, ಆಧ್ಯಾತ್ಮಿಕವಾಗಿ, ಸಾಮಾಜಿಕವಾಗಿ ಸಾಧನೆಗೈಯಬಹುದು ಎಂಬ ಸಮಾನತೆಯನ್ನು ಸಾರಿ, "ಬ್ರಾಹ್ಮಣ ಮೊದಲು ಅಂತ್ಯಜಕಡೆ" ಎಂಬ ಭಾವನೆಯನ್ನು ಮೆಟ್ಟಿನಿಂತು ಜಾತಿಯತೆಯನ್ನು ದೂರಿಕರಿಸಿ ಜಾತ್ಯಾತೀತತೆಯನ್ನು ಸಾರುತ್ತಾ, ಸಮಾಜದ ಕೆಳಸ್ತರದ ಹಿಂದುಳಿದ ದಲಿತರನ್ನು

ಒಳಗೊಂಡು, ಹನ್ನೆರಡನೇ ಶತಮಾನದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ವಚನಗಳೆಂಬ ಸಾಹಿತ್ಯ ಪ್ರಕಾರದೊಂದಿಗೆ, ಧಾರ್ಮಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಕೌಟುಂಬಿಕವಾಗಿ, ಸಾಮಾಜಿಕವಾಗಿ ಹೊಸಕ್ರಾಂತಿಯು ಪ್ರಾರಂಭವಾಯಿತು.

ನೂರಾರು ಸ್ಥಳೀಯ ಜಾತಿಗಳನ್ನು ದಾಳವಾಗಿ ಉಪಯೋಗಿಸಿಕೊಂಡು ಶೋಷಣೆ ಮಾಡುತ್ತಿದ್ದ ಪರಂಪರೆಗಳನ್ನು ದೂರಮಾಡಿ ಸಾಮಾಜಿಕತೆಯ ನೆಲೆಯಲ್ಲಿ ಹೊಸ ಪರಂಪರೆಗೆ ಮಾರ್ಗಸೂಚಿಗಳಾಗಿ ವಚನಗಳು ರಚನೆಗೊಂಡವು, ಕಾಯಕ, ದಾಸೋಹ, ಭಕ್ತಿಯ ಪರಿಕಲ್ಪನೆಯ ಆಧಾರದ ಮೇಲೆ ಲಿಂಗ ತಾರಮತ್ಯವನ್ನು ದೂರಿಕರಿಸಿ ನಿರಕ್ಷರಸ್ಥರಿಗೂ ಅಕ್ಷರ ತೋರಿಸುವ ಪ್ರಯತ್ನದಲ್ಲಿ ಬಹಳಷ್ಟು ಯಶಸ್ವಿಯಾದವರು ವಚನಕಾರರು ಎಂದರೆ ತಪ್ಪಾಗಲಿಕ್ಕಿಲ್ಲಾ. ಮಾದಾರ ಚನ್ನಯ್ಯ, ಡೊಹರ ಕಕ್ಕಯ್ಯ, ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯ, ಲಕ್ಕಮ್ಮ, ರೆಮ್ಮವ್ವೆ, ಕಾಳವ್ವೆ, ಸೂಳೆ ಸಂಕವ್ವೆ ಮುಂತಾದ ಸ್ತ್ರೀಯರು, ಹಾಗೂ ಪುರುಷರು, ಸಮಾನತೆಯಿಂದ ಈ ಶರಣ ಆಂದೋಲನದಲ್ಲಿ ಪಾಲ್ಗೊಂಡು ವಿವಿಧ ಜಾತಿ ನಂಬಿಕೆಗಳಿಂದ ಬಂದಿದ್ದರೂ, ಏಕತೆಯಿಂದ ಒಗ್ಗೂಡಿ ಅನುಭವದ ಮಂಟಪದಗೋಷ್ಠಿಯಲ್ಲಿ ಅನೇಕ ವಿಚಾರಗಳನ್ನು ಚರ್ಚಿಸಿ ಧಾರ್ಮಿಕವಾಗಿ, ರಾಜಕೀಯವಾಗಿ ಆರ್ಥಿಕವಾಗಿ, ಸಾಮಾಜಿಕವಾಗಿ ಚಿಂತನೆ ನಡೆಸಿ ಸಮಾಜಕ್ಕೆ ಮಹತ್ವವಾದ ಕೊಡುಗೆಗಳೆಂಬಂತೆ ವಚನಗಳನ್ನು ರಚಿಸಿ ಚರ್ಚಿಸಿ ತಮ್ಮ ಅನುಭವದ ಉದಾತ್ತೀಕರಣದ ಜೊತೆಗೆ ಸಾಮಾಜಿಕವಾಗಿ ಬದಲಾವಣೆಯನ್ನು ಬಯಸಿ ಸಮಾಜದ ಅಂಧಕಾರಕ ವಿಷಯಗಳನ್ನು ಟೀಕಿಸುತ್ತಾ ಸಮಾಜದ ಸುಧಾರಣೆಗೆ ತೊಡಗಿದರು.

ವಚನ ಚಳುವಳಿ ಮುಖ್ಯವಾಗಿ ಮತಧಾರ್ಮಿಕ ಚಳುವಳಿ ಎಂಬುದನ್ನು ನಾವು ಒಪ್ಪಬೇಕಾಗುತ್ತದೆ. ಸಾಮಾಜಿಕ ,ಧಾರ್ಮಿಕ, ಆರ್ಥಿಕ, ರಾಜಕೀಯ ಸುಧಾರಣೆಗಳೇನಿದ್ದರು. ಮತಕ್ಕೆ, ಧರ್ಮಕ್ಕೆ, ಅನುಷಂಗಿಕವಾಗಿರುವಂತಹ ಪರಿಕಲ್ಪನೆಗಳೇ ಆಗಿವೆ ಇದು ಕೇವಲ ಹನ್ನೆರಡನೇ ಶತಮಾನದ ಶರಣರ ವಚನ ಚಳುವಳಿಗಳಿಗಷ್ಟೇ ಸೀಮಿತವಾದ ಅಂಶವೇನಲ್ಲಾ ಭಾರತದಲ್ಲಿ ಅಥವಾ ಇಡಿ ವಿಶ್ವದಲ್ಲಿಯ ಎಲ್ಲಾ ಚಳುವಳಿಗಳು ಮತ ಧಾರ್ಮಿಕ ಚೌಕಟ್ಟಿನಲ್ಲಿ ನಡೆದಂತವುಗಳಾಗಿವೆ.

ವಚನಕಾರರು, ಶರಣರು ಪ್ರತಿಪಾದಿಸಿದ ಮತವು ಹೊಸದೇನಲ್ಲಾ ವೀರಶೈವ ಅಥವಾ ಲಿಂಗಾಯತ ಮತವನ್ನು ಬಸವಣ್ಣ ಸ್ಥಾಪಿಸಿನೆಂಬ ಭಾವನೆ ಅನೇಕರಲ್ಲಿದೆ ಆದರೆ ಸದ್ಯಕ್ಕೆ ಮಾನ್ಯತೆ ಇಲ್ಲದಂತಾಗಿದೆ ಬಸವಣ್ಣನವರ ನಾಯಕತ್ವದ ಶರಣ ಚಳುವಳಿಗಿಂತಲು ಹಿಂದೆ ಈ ವೀರಶೈವ ಧರ್ಮವಿತ್ತು ಎಂದು ಇನ್ನೂ ಅನೇಕರ ಭಾವನೇಯು ಇದೆ. ಇದರಿಂದ ಆ ಧರ್ಮದ ರೂಪರೇಷಗಳೇನು? ಅದರ ಉಗಮ ಸ್ವರೂಪವೇನು ಎಂಬಂತಹ ಪ್ರಶ್ನೇಗಳು ನಮಗೆ ಕಾಣುತ್ತವೆ. ವೀರಶೈವವು ಕಾಳಮುಖದಂತಹ ಶೈವ ಪಂಥಗಳ ವಿಕಸಿತ ಪರಿಸ್ಕೃತರೂಪ ಎಂದು ಹಲವಾರು ವಿಧ್ವಾಂಸರು ಗುರುತಿಸಿದ್ದಾರೆ, ಬಸವಾದಿ ಶರಣರಿಗಿಂತ ಹಿಂದೆ ಇದ್ದ ವೀರಶೈವ ಧರ್ಮದ ಸ್ವರೂಪವನ್ನು ಡಾ. ಎಂ. ಚಿದಾನಂದ ಮೂರ್ತಿ ಈ ರೀತಿ ಸಂಗ್ರಹಿಸಿದ್ದಾರೆ ಒಂದು "೧. ಬ್ರಾಹ್ಮಣ ವಿರೋಧಿ ೨. ಶಿವನ ಬಗ್ಗೆ ಭಕ್ತಿ ೩. ರಾಜತ್ವಕ್ಕೆ ವಿಶೇಷ ಗೌರವ ನೀಡುವುದು. ೪. ಭಕ್ತರಲ್ಲಿ ಅಸಮಾನತೆಯ ಬೇಧ ಭಾವದ ವಿರೋಧ

೫. ಮಾಂಸಹಾರ ಸಸ್ಯಹಾರಗಳ ಕಟ್ಟು ನಿಟ್ಟುಗಳು ಇಲ್ಲದಿರುವಿಕೆ ೬. ಸ್ಥಾವರ ಲಿಂಗ , ಇಷ್ಟ ಲಿಂಗ ಇವೆರಡು ರೂಪದ ಲಿಂಗ ಪೂಜೆ ೭. ವೃತ್ತಿ ನಿರತರು ಒಡೆಯನಿಗೆ ಜೋಳವಾಳಿಯಾಗಿ ಕೆಲಸ ಮಾಡಿದರು ಶಿವನಿಗೆ ವೇಳವಾಳಿಯಾಗಿ ನಿಷ್ಠೆಯಲ್ಲಿರುವುದು ೮. ಶಿವಭಕ್ತರಿಗೆ ಪ್ರಾಮುಖ್ಯ "೧ (ಡಾ॥ ಎಂ. ಚಿದಾನಂದ ಮೂರ್ತಿ ವಚನ ಸಾಹಿತ್ಯ ೧೯೭೫ ಪು.ಸಂ. ೩೦–೩೨) ವಚನಕಾರರ ಈ ಮತದ ಹಲವಾರು ಅಂಶಗಳನ್ನು ಸುಧಾರಿಸಿಕೊಂಡು ಒಂದು ಸುಂದರವಾದ ಸ್ವರೂಪವನ್ನು ನೀಡಿದರೆಂಬುದು ಅನೇಕ ವಿದ್ವಾಂಸರ ಅಭಿಪ್ರಾಯವಾಗಿ ಹೊಮ್ಮಿದೆ ಕೇವಲ ವಚನಕಾರರು ಕಾಲದಲ್ಲಿ ಪ್ರತಿಭಟನೆಯ ರೂಪವಾಗಿ ವೀರಶೈವವು ಹೊಮ್ಮಿತೆಂದು ತೋರುತ್ತದೆ ಇದಕ್ಕೆ ಹಿಂದೆ ಇದ್ದ ಬೌದ್ಧ ಹಾಗೂ ಜೈನ ಧರ್ಮಗಳು ವೇದದ ಪ್ರಾಮುಖ್ಯತೆಯನ್ನು ಪುರೋಹಿತ ಶಾಹಿಗಳ ದೌರ್ಜನ್ಯವನ್ನು ಪ್ರಾಣಿ ಹಿಂಸೆಯನ್ನು ಯಜ್ಞ ಯಗಾದಿಯನ್ನು ನಿರಾಕರಿಸಿ ಬೌದ್ಧ ಮತ್ತು ಜೈನ ಧರ್ಮಗಳು ಹೊಸಮತಗಳಾಗಿ ಮೂಡಿಬಂದಿದ್ದವು. ಆದರೆ ಕಾಲಕ್ರಮೇಣ ಇವುಗಳಲ್ಲಿ ಅಂಧ ಆಚರಣೆಗಳು ಅವೈಜ್ಞಾನಿಕತೆಯು ತಲೆದೋರಿ ವಿಫಲವಾಗತೊಡಗಿದವು, ಇದರಿಂದ ದಕ್ಷಿಣ ಭಾರತದಲ್ಲಿ ಹನ್ನೆರಡನೇ ಶತಮಾನದಲ್ಲಿ ಈ ಹಿಂದೆ ಇದ್ದಂತಹ ಶೈವ ಮತವು ವೀರಶೈವವಾಗಿ, ಬ್ರಾಹ್ಮಣ ವಿರೋಧಿಯಾಗಿ ಅಂದ ಆಚರಣೆಗಳಿಗೆ ಮಾರಕವಾಗಿ ಸಾಮಾಜಿಕ ಮೌಲ್ಯಗಳನ್ನು

ಮಾನವೀಯ ಮೌಲ್ಯಗಳನ್ನು ಹೊಂದಿಸಿಕೊಂಡು ಪ್ರತಿಭಟನೆಯ ರೂಪವಾಗಿ ಸಮಾಜ ಸುಧಾರಣೆಯ ಕನಸು ಹೊತ್ತುಕೊಂಡು ಬಂದದ್ದು ಶರಣರ ಚಳುವಳಿಯಾಗಿದೆ. ವೈದಿಕ ಧರ್ಮದ ಯಜ್ಞ ಪ್ರಾಮುಖ್ಯ ಅನೇಕದೈವೋಪಾಸನೆ ಇತರ ಜಾತಿಗಳ ಹಾಗೂ ಶೂದ್ರರು ಪಂಚಮರು ಎಂಬ ಕೆಳಸ್ಥರದ ಜನರು ಆರಾಧಿಸುತ್ತಿದ್ದ ಇತರ ಧಾರ್ಮಿಕ ಆಚರಣೆಗಳ ವಿರುದ್ಧ ಬಂಡೆದ್ದುದಲ್ಲದೆ ಇತರ ಭೌದ್ಧ ಜೈನ ವೈದಿಕ ಧರ್ಮಗಳನ್ನು ಅದರ ಆಚರಣೆಗಳನ್ನು ವಿರೋಧದಿಂದ ನೋಡುತ್ತಾರೆ. ಅಲ್ಲದೆ ತಮ್ಮ ಕಾಲದಲ್ಲಿ ವ್ಯಾಪಕವಾಗಿ ಆವರಿಸಿದ್ದ ಶೈವ–ಶಾಕ್ತ ಪಂಥಗಳ ವಾಮಾಚಾರವನ್ನು, ಅಸಹ್ಯಕರ ಆಚರಣೆಗಳ ಬಗ್ಗೆ ವಚನಾಕಾರರರಿಗೆ ವಿರೋಧ ಮತ್ತು ಅಸಹನೆ ಇದೆ ಆದ್ದರಿಂದ ಬಸವಾದಿ ಶರಣರ ಮುಖ್ಯ ಉದ್ದೇಶವು ಸಾಮಾನ್ಯರನ್ನು ಒಳಗೊಳ್ಳಬಲ್ಲ ಅವರಲ್ಲಿ ಆತ್ಮವಿಶ್ವಾಸವನ್ನು ಮೂಡಿಸಬಲ್ಲ ಆಚರಣೆಗಳ ವಿಫುಲತೆಯಿಂದ, ಜಟಿಲತೆಯಿಂದ ಗೋಜಲುಗೊಳ್ಳದ ಸರಳ ಮತವನ್ನು ಸ್ಥಾಪಿಸುದಾಗಿತ್ತೆಂದು ಹೇಳಿದರೆ ಉತ್ಪ್ರೇಕ್ಷೆಯಲ್ಲ.

ಸಾಮಾನ್ಯನಿಗೆ ಅರ್ಥವಾಗುವ ಉದ್ದೇಶ– ಘೋಷಣೆಗಳಿಂದ ಮಾತ್ರ ಒಂದು ಸಿದ್ದಾಂತವು ಜನಪ್ರಿಯವಾಗಬಲ್ಲದು ಹಾಗಾಗಿ ವಚನಕಾರರು ಪಂಡಿತ ಮಂಡಳಿಯನ್ನು ಬಿಟ್ಟು ಬುಧ್ಧಿವಂತ ವರ್ಗಕ್ಕೆ ಸೀಮಿತವಾಗದೆ ನಿರಕ್ಷರಸ್ತರನ್ನು ಸಮಾಜದ ನಾನಾ ವೃತ್ತಿಯನ್ನು ಅವಲಂಬಿಸಿರುವ ಸಾಮಾನ್ಯರನ್ನು ತಮ್ಮ ಹೋರಾಟದ ನಾಯಕರಾಗಿ ಬದಲಾಯಿಸಿ ಸರ್ವರಿಗೂ ಅರ್ಥವಾಗುವ ರೀತಿಯಲ್ಲಿ ವಚನಗಳನ್ನು ರಚಿಸಿ ಅದರಿಂದ ಒಂದು ಆದರ್ಶ ಸಮಾಜದ ನಿರ್ಮಾಣ ಕಾರ್ಯಕ್ಕೆ ನಿಯಮಗಳನ್ನು ರೂಪಿಸಿಕೊಂಡತಹ ಕಾರ್ಯ ಮಾಡಲಾಯಿತು.

ವಚನಕಾರರ ಜ್ಞಾನಿಗೆ ಮಾತ್ರ ಮೋಕ್ಷ ಎಂಬಿತ್ಯಾದಿಯಾಗಿ ಹೇಳದೆ ಜೀವನ ವಿರಕ್ತಿಯ ಬದಲು ಜೀವನ ಅನುರಕ್ತಿಯನ್ನು ತೋರಿದರು ಇದು ಪ್ರಾಯಶಃ ವಚನ ಚಳುವಳಿಯು

ಹೆಚ್ಚು ಜನರನ್ನು ಆಕರ್ಷಿಸಿ ಸಲು ಕಾರಣವಾಯಿತು ಕೊಳ್ಳಲಾಯಿತು. ಬೌದ್ಧ ಜೈನ, ಧರ್ಮದಲ್ಲಿರುವಂತಹ ಕಠಿಣ ಸಾಧನೆಗಳಿಂದ, ಕೇವಲ ಜೀವನ ವಿರಕ್ತಿಯಿಂದ ಮಾತ್ರ ಮೋಕ್ಷ ಸಾಧ್ಯವೆಂಬ ಕ್ರೌರ್ಯ ಭರಿತ ಆಚರಣೆಗಳಿಂದ ಸಾಮಾನ್ಯ ಜನರು ಭಯಭೀತರಾಗಿದ್ದರು. ಇಂತಹ ಪರಿಸ್ಥಿತಿಯಲ್ಲಿ ಶರಣರು "ಸತಿ ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ" ಎನ್ನುವ ದೇವರ ದಾಸಿಮಯ್ಯನ ವಚನದಂತೆ ಜನ ಸಾಮನ್ಯರಿಗೆ ಸುಲಭವಾಗಿ ಸಂಸಾರದಲ್ಲಿದ್ದುಕೊಂಡು ಕೇವಲ ಭಕ್ತಿ ಸಾಧನೆಯಿಂದ ನಿರ್ಮಲ ಮನಸ್ಸಿನಿಂದ ಶುದ್ಧ ಶೀಲದಿಂದ ಮಾತ್ರ ಮೋಕ್ಷ ಸಾಧ್ಯವೆಂಬ ನಿಲುವು ವಚನಕಾರರಿಂದ ಜನ ಸಾಮಾನ್ಯರಿಗೆ, ಕೆಳಸ್ತರದ ಜನರಿಗೆ ತಿಳಿಯಿತು ಅಲ್ಲದೆ ಇತರ ಬೌದ್ಧ ಜೈನ ವೈದಿಕ ಧರ್ಮಗಳಲ್ಲಿ ಸ್ತ್ರೀ ಕೇವಲ ಅಡಿಯಳಾಗಿ ಪುರುಷನ ಶೋಷಣೆಗೆ ಒಳಗಾದ ರೀತಿಯಲ್ಲಿ ನಿಕೃಷ್ಠ ಜೀವನ ನಿರ್ವಹಣೆ ಮಾಡಬೇಕಾದಂತಹ ಕಾಲಘಟ್ಟದಲ್ಲಿ ಶರಣರ ಆಂದೋಲನಾ ಸ್ತ್ರೀ ಸಮಾನತೆಯ ವಿಷಯವಾಗಿ ಚರ್ಚಸಿ ಸ್ತ್ರೀಯು ಪುರುಷನಷ್ಟೆ ಮೋಕ್ಷಕ್ಕೆ ಅರ್ಹಳು ಎಂಬ ನಿಲುವಿನಿಂದ ಸಮಾಜದಲ್ಲಿ ನೋವನ್ನು ಉಂಡು ನರಳುತ್ತಿದ್ದ ಸ್ತ್ರೀ ಸಂಕುಲವು ನೆಮ್ಮದಿಯಿಂದ ಜೀವನ ನಿರ್ವಹಣೆ ಮಾಡುವುದರ ಜೊತೆಗೆ ಧಾರ್ಮಿಕ, ಆರ್ಥಿಕ, ಸಾಮಾಜಿಕ ಸ್ಥಾನಮಾನಗಳನ್ನು ಗಳಿಸಿಕೊಳ್ಳುವಂತಾಹ ಸ್ಥಿತಿ ನಿರ್ಮಾಣ ವಾಗುವುದಕ್ಕೆ ಈ ಶಿವಶರಣರ ವಚನ ವಳುವಳಿ ಕಾರಣವಾಗುವ ಹಂತಕ್ಕೆ ಬೆಳೆದು ನಿಂತಿತು.

ಹೆಣ್ಣನ್ನು ಮಾಯೆ ಎಂದು ಹೇಳಿಕೊಂಡು ಬಂದಿದ್ದಂತಹ ದೊಡ್ಡವರ ಮಾತುಗಳನ್ನು ನಂಬುವುದು ಹೇಗೆ? ಎಂದು ಜೀವನದಲ್ಲಿ ಗಂಡಿಗೆ ಸಮಾನವಾಗಿ ನಿಲ್ಲಬಲ್ಲ ಶಕ್ತಿ ಅವಳಲ್ಲಿದೆ. ಎನ್ನುವುದರ ಜೊತೆಯಲ್ಲಿ ಜೀವನ ದಲ್ಲಿನ ನೋವುಗಳಿಗೆ ಸಾಂತ್ವನವಾಗಿ ನೋವನ್ನು ಎದುರಿಸಬಲ್ಲ ಚೈತನ್ಯ ಸ್ವರೂಪಳಾಗಿ ಒಬ್ಬ ಗಂಡಿನ ಸಾಧನೆಗೆ ಸ್ಪೂರ್ತಿಯಾಗಿ ನಿಲ್ಲಬಲ್ಲ ಹೆಣ್ಣು . ಹೇಗೆ ಅವಳನ್ನು ಮಾಯೆಯೆಂದು ಶತ್ರುವೆಂದು ಬಗೆಯುವುದು ಎಂಬ ಅನುಭವದ ನುಡಿ ಉಪದೇಶ ಸಾಮಾನ್ಯನಿಗೆ ಕಣ್ಣನ್ನು ತೆರೆಸುತ್ತದೆ, ಇದ್ದಕ್ಕಾಗಿ ಬಸವಣ್ಣ "ಸತಿ ಪತಿಯರ ಪ್ರತಿ ದೃಷ್ಟಿಯಾಗಿ ಮಾಡಬಲ್ಲದೆ ಆದೇ ಮಾಡು ಕೂಡಲಸಂಗಮದೇವರ ಕೂಡುವ ಕೂಟ"

ಹೊನ್ನು ಮಾಯೆ ಎಂಬರು ಹೊನ್ನು ಮಾಯೆಯಲ್ಲಿ
ಹೆಣ್ಣು ಮಾಯೆ ಎಂಬರು ಹೆಣ್ಣು ಮಾಯೆಯಲ್ಲಿ
ಮಣ್ಣು ಮಾಯೆ ಎಂಬರು ಮಣ್ಣು ಮಾಯೆಯಲ್ಲಿ
ಮನದ ಮುಂದಣ ಆಸೆಯೆ
ಮಾಯೆಕಾಣ ಗುಹೇಶ್ವರ
ಮೋಲೆಮುಡಿ ಬಂದಡೆ ಹೆಣ್ಣೆಂಬರು
ಗಡ್ಡಮೀಸೆ ಬಂದೆಡೆ ಗಂಡೆಂಬರು
ಒಳಗೆ ಸುಳಿವಾತ
ಹೆಣ್ಣು ಅಲ್ಲ ಗಂಡು ಅಲ್ಲ ಕಾಣ ರಾಮನಾಥ

ಎಂದು ಹೇಳುವುದರ ಮೂಲಕ ಸ್ತ್ರೀಗೆ ಸಾಮಾಜಿಕ ನ್ಯಾಯ ದೊರಿಕಿಸಿ ಕೊಡುವ ಪ್ರಯತ್ನ ಮಾಡುತ್ತಾನೆ ಇಂತಹ ಮಾತುಗಳು ಸಾಮಾನ್ಯರಿಗೆ ಗೊಂದಲ ಉಂಟು ಮಾಡದೆ ಸ್ತ್ರೀ – ಪುರುಷರಿಗೆ ಸಂತೋಷಕರ ಪರಿಸರ ಉಂಟಾಗಿ ಇದರಲ್ಲಿ ತಮ್ಮ ಅನುಭವವೇ ಅಡಗಿರುವುದನ್ನು ಕಂಡು ಜನಸಾಮಾನ್ಯರಿಗೆ ಗಂಡ– ಹೆಂಡತಿಯರಿಗೆ ತಮ್ಮ ಜೀವನದಲ್ಲಿ ಆಶಾಭಾವನೆ ಉಂಟಾಗದೇ ಇರದು.

ಹಿಂಸಾತ್ಮಕವೂ ಬೀಭತ್ಸಕರವು ಆದ ಅಂಧಧಾರ್ಮಿಕಾಚರಣೆಗಳು ಆಕಾಲಕ್ಕಾಗಲೇ ಅನೇಕ ಮೃದು ಹೃದಯಗಳ ಮನಸ್ಸಿನಲ್ಲಿ ಜಿಗುಪ್ಸಾ ಭಾವನೆ ಮೂಡಿಸಿ ಬದಲಾವಣೆಗೆ ಹಂಬಲಿಸುತ್ತಿದ್ದವು ಇಂತಹ ಸಂದರ್ಭದಲ್ಲಿ ಶರಣರು ವಚನಕಾರರ ಸಾತ್ವಿಕ ಭಕ್ತಿಯನ್ನು ಪ್ರಚುರಪಡಿಸುವುದರ ಜೊತೆಗೆ ಮೂಢ ಆಚರಣೆಗಳ ವಿರುದ್ಧ ಧ್ವನಿ ಮಾಡತೊಡಗಿದರು, ಏಕೆಂದರೆ ಸಾಮಾನ್ಯ ಜನರು ಬಹುತೀರ ಸರಳ ಹಾಗೂ ನೇರವು ಹಾಗೂ ಶುಧ್ಧವು ಆದ ಬದುಕನ್ನು ಬಯಸುತ್ತಿದ್ದರು .ಹೀಗಾಗಿ ಧರ್ಮದ ಹೆಸರಿನಲ್ಲಿ ಮಾಡುತ್ತಿದ್ದ ಹಿಂಸೆ ಶೋಷಣೆಗಳಿಗೆ ಹಾಗೂ ಅವುಗಳನ್ನು ಪಾಲಿಸಿ ಪೋಷಿಸಿಕೊಂಡು ಬರುವವರ ವಿರುದ್ಧ ಸಾಮಾನ್ಯ ಮನದಾಳದಲ್ಲಿ ಕ್ರೋಧಗಳು ಸಿಟ್ಟು , ತಾತ್ಸರತೆ ನೆಲೆಸಿದ್ದಿರಬೇಕು ಆದರೆ ಅದನ್ನು ಹೊರಹಾಕುವ ಬಗೆಯ ಬಗ್ಗೆ ಚಿಂತನೆಗೆ ತೊಡಗಿರಬಹುದು ಇಂತಹ ಸಾಮಾಜಿಕ ಸಂಘಟನಯೊಂದನ್ನು ಕಾಯುತ್ತಿರುವವರಾಗಿರ ಬೇಕು ಎಂದೆ ಕಾಣುತ್ತದೆ. ಬಸವಾದಿ ಶರಣರ ಕಾಲದಲ್ಲಿ ವಚನ ಚಳುವಳಿಯ ಮೂಲಕ ವ್ಯಕ್ತಗೊಂಡ ಅಂಶವೆಂದರೆ ಅಧಾರ್ಮಿಕ ಅಮಾನವೀಯವೆಂದು ಕಾಣುವ ಆಚರಣೆಗಳನ್ನು ಪ್ರತಿಭಟಿಸುವ ಹಾಗೂ ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿಯುವ ದಾರ್ಢ್ಯತೆ ಅಭಿವ್ಯಕ್ತಗೊಂಡಿತು . ಆಚರಣೆಗಳು ಪದ್ಧತಿಗಳು ನೀತಿ ನೇಮಗಳು ಬದಲಾಗಿ ಆಹಾರ ಪಧ್ಧತಿಯಲ್ಲೂ ಗಮನೀಯ ಬದಲಾವಣೆಯನ್ನು ಸಾಧಿಸಿ ಸಸ್ಯಾಹಾರವೇ ಮುಖ್ಯವಾಗಿರಲಾಗಿ ಶ್ರೇಷ್ಟವಾಗಿ ಮಾಂಸಹಾರ ಕೀಳೆಂಬ ಭಾವನೆ ಪ್ರಚಲಿವಾಯಿತು ಒಟ್ಟಿನಲ್ಲಿ ಮೃದತ್ವದ ಭಾವನೆಯನ್ನು ಸರಳತೆಯನ್ನು ಅಹಿಂಸೆಯನ್ನು ಸಮಾನೆಯನ್ನು ಸಾರುವ ಶರಣರ ಬಸವಣ್ಣನವರ ಪ್ರಯತ್ನಕ್ಕೆ ಸಾಮಾನ್ಯರಿಂದ ಬಹಳಷ್ಟು ಮನ್ನಣೆ ದೊರಕಿತು.

ನಿಷ್ಠೆಯಿದ್ದರೆ ಸ್ವಾರ್ಥ ಭಾವನೆಯಿಲ್ಲದಿದ್ದರೆ ಮಾತ್ರ ಯಾವುದಾದರು ಸಂಘಟನೆ ಯಶಸ್ವಿಯಾಗಿ ಹೋರಾಟ ನಡೆಸಬಲ್ಲದು ಆದರೆ ಅದು ಎಷ್ಟರ ಮಟ್ಟಿಗೆ ನಿಷ್ಟೆ ಇರಬೇಕು ಯಾವ ಬಗೆಯಲ್ಲಿರ ಬೇಕು ಅಥವಾ ನಂಬಿಕೆ ಎಂಬುದು ಯಾವ ಪ್ರಮಾಣದಲ್ಲಿ ನೆಲೆನಿಂತಿದೆ ಎಂಬುದರ ಅರಿವು ಮೂಡಬೇಕಾಗುತ್ತದೆ ಅದರಂತೆ ನಿಷ್ಠೆ ನಂಬಿಕೆಗಳು ಬೇರೂರಿದ್ದ ಕಾರಣವಾಗಿಯೇ ವಚನ ಚಳುವಳಿಗೆ ಒಂದು ಹೊಸ ಅಯಾಮ ದೊರಕಿ ಸಾಮಾಜಿಕ ಮೌಲ್ಯಗಳೊಂದಿಗೆ ಹೊರಾಟ ಮಾಡತೊಡಗಿತು ಎಂದೇ ನಮ್ಮ ಭಾವನೆಯಾಗುತ್ತದೆ. ಅದೇ ರೀತಿಯಲ್ಲಿ ನಿಷ್ಟೆ ಕುರುಡಾಗದಂತೆ ನಂಬಿಕೆ ಅಪನಂಬಿಕೆಯಾಗದಂತೆ ಎಚ್ಚರಿಕೆ ಭಾವನೆಯಿಂದ ಇರಬೇಕಾಗುತ್ತದೆ ಇದಕ್ಕೆ ಮೂಲಕಾರಣವಾಗಿ ಹಿಂದಿನ ಆಚರಣೆಗಳ ಮೂಢ ಸಾಂಪ್ರದಾಯಿಕ ನಿಲುವಿನಲ್ಲಿದ್ದ ಅನೇಕ ಧರ್ಮಗಳನ್ನು ಹಾಗೂ ಅವುಗಳ ನಾಶವಾದ ಸ್ಥಿತಿಯನ್ನು

ಅರಿಯಬೇಕಾಗುತ್ತದೆ ಅದರಂತೆಯೇ ವಚನ ಚಳುವಳಿಯ ನಂತರ ವೀರಶೈವ ಧರ್ಮದಲ್ಲಿ ಇಂದಿನ ವಾತಾವರಣದಲ್ಲಿ ನಿರ್ಮಾಣವಾಗಿರುವ ಜಾತಿ ಉಪಜಾತಿಗಳ ವ್ಯವಸ್ಥೆಯನ್ನೆ ಇದಕ್ಕೆ ನಿದರ್ಶನವಾಗಿ ನಾವು ಇಂದು ನೋಡಬಹುದಾಗಿದೆ.

ಹನ್ನೆರಡನೇ ಶತಮಾನದ ವಚನಕಾರರು ಶರಣರು ಜನರ ನಂಬಿಕೆಯನ್ನು ನಿಷ್ಠೆಯಾಗಿ ಪರಿವರ್ತಿಸಲು ಶಿವನ ಕಲ್ಪನೆಯನ್ನು ಇಷ್ಟಲಿಂಗದ ಕಲ್ಪನೆಯನ್ನು ಬಳಸಿಕೊಂಡರು, ಹಾಗೆ ನೋಡಿದರೆ ಶಿವ ಪಾರಮ್ಯದ ನಂಬಿಕೆಯಸುತ್ತ ಬೆಳೆದು ಬಂದದ್ದು ವಚನ ಚಳುವಳಿ. ಎಂಬುದು ಕಾಣುತ್ತದೆ. ಪ್ರೇಮಮಯವು, ಮಂಗಳಕರವು ಆದ, ಸಹಾನುಭೂತಿಪರವಾದ ದೈವನ್ನಾಗಿ ಶಿವನನ್ನು ವಚನಕಾರರು ಕಂಡಿರಿಸಿದರು. ಅಲ್ಲಿಯ ತನಕ ಕಾಪಾಲಿಕ ಕೌಳರು ಪಾಶುಪತ ಮುಂತಾದ ಪರಂಪರೆದವರು ತಮ್ಮ ತಮ್ಮ ಆಚರಣೆಗೆ ಅನುಗುಣವಾಗಿ ಸ್ಮಶಾಣವಾಸಿಯೆಂದು, ಮಾಂಸಹಾರಿಯೆಂದು, ರುದ್ರಮಯ ಮೂರ್ತಿಯ ಭಾವನೆಯನ್ನು ಹುಟ್ಟು ಹಾಕಿಬಿಟ್ಟಿದ್ದರು, ಆದರೆ ಬಸವಾದಿ ಶರಣರು ಅದು ಸತ್ಯಕ್ಕೆ ದೂರವಾದುದು ಎಂದು ಪ್ರೇಮಮಯ ಸೌಮ್ಯಮಯ ಮೂರ್ತಿಯನ್ನಾಗಿ ಶರಣರು ಶಿವನನ್ನು ತೋರಿಸಿಕೊಟ್ಟರು, ಇದರಿಂದ ಜನಸಾಮಾನ್ಯರು ಬಹುಬೇಗ ಶಿವನನ್ನು ಮತ್ತು ವಚನಕಾರರ ಸಿದ್ಧಾಂತವನ್ನು ಆತ್ಮೀಯವಾಗಿ ಸ್ವೀಕರಿಸಿದರು. ಈ ಶಿವನಿಷ್ಠೆಯುಳ್ಳ ಒಂದು ಸಂಘಟನಾ ವಲಯದ ಪರಿದಿಯೊಳಗೆ ಬರುವವರೆಲ್ಲರೂ ಸಮಾನರು ಎಂದು ವಚನಾಕಾರರು ಹೇಳಿದುದು ಜನರಿಗೆ ಇಷ್ಟವಾಯಿತು, ನಾನಾ ವಿಧದ ನೋವುಗಳಿಂದ ನರಳುತ್ತಿದ್ದ ಸಮಾಜದ ಕೆಳಸ್ತರದ ಜನರು, ಮಹಿಳೆಯರು, ಶೋಷಣೆಗೆ ಒಳಗಾದ ಸಾಮಾನ್ಯ ಜನರು, ಈ ಸಮಾನತೆಯ ಕಾರಣದಿಂದ ಉತ್ಸುಕರಾಗಿ ಒಗ್ಗೂಡುವ ಪ್ರಯತ್ನಮಾಡಿದರು.

ಬಹು ಕಾಲದಿಂದಲು ಭಾರತೀಯ ಸಮಾಜವನ್ನು ತನ್ನ ಕಪಿಮುಷ್ಟಿಯಲ್ಲಿ ಹಿಡಿದು ಕಾಡಿಸುತ್ತಿದ್ದುದು ಜಾತಿ ಪದ್ಧತಿ, ಸಾಮಾನ್ಯವಾಗಿ ಸಮಾಜದಲ್ಲಿ ಜನರು ಮಾಡುತ್ತಿದ್ದ ವೃತ್ತಿಗಳೇ ಜಾತಿ ವ್ಯವಸ್ಥೆಗೆ ಮೂಲಕಾರಣವಾಗಿರಬಹುದಾಗಿದೆ. ಇದು ಹಾಗೇಯೆ ಮುಂದುವರೆದು ಮುಂದೆ ಬರುಬರುತ್ತಾ ಸಮಾಜವನ್ನು ಒಡೆದು ಚೂರು ಚೂರು ಮಾಡಿ ನಮ್ಮ ಸಮಾಜದ ಏಳ್ಗೆಗೆ ಅಡ್ಡಿಯಾಗಿ ಬಿಟ್ಟಿದೆ, ವರ್ಣ ಪದ್ದತಿಗಳು ಸವರ್ಣೀಯರ ಜತೆಯಲ್ಲಿ ವೈವಾಹಿಕ ಒಪ್ಪಂದಗಳನ್ನು ನಡೆಸಿಕೊಂಡು ಬಂದರೆ ಇತರೆ ಜಾತಿ ಪದ್ದತಿಗಳಾಗಿ ಬಿಂಬಿತಗೊಂಡಿದ್ದ. ಅನೇಕ ವೃತ್ತಿಗಳನ್ನು ಕೈಗೊಂಡಿದ್ದ ಕೆಳಸ್ಥರದ ಶೂದ್ರವರ್ಗ ಹಾಗೂ ಇತರ ಹಿಂದುಳಿದ ದಲಿತ ವರ್ಗಗಳು ತಮ್ಮದೇ ಆದ ಒಳ ಪಂಗಡ, ಜಾತಿ ಉಪಜಾತಿಗಳಾಗಿ ಮಾರ್ಪಟ್ಟು, ತಮ್ಮ ಮತ್ತು ಇತರರ ನಡುವೆ ಒಡೆಯಲು ಬಾರದಂತಹ ತಡೆಗೋಡೆಯನ್ನು ನಿರ್ಮಿಸಿಕೊಂಡೆ ಬಿಟ್ಟವು, ನಮ್ಮ ಜಾತಿ ಪದ್ಧತಿಯು ಎಷ್ಟರಮಟ್ಟಿಗೆ ಬೇರು ಬಿಟ್ಟಿದೆ ಎಂದರೆ ಯಾವುದೇ ಬಗೆಯ ಸುಧಾರಕಾ ಚಳುವಳಿಯು ಜನಗಳು ಸಂಪೂರ್ಣವಾಗಿ ತಮ್ಮ ಜಾತಿಗಳನ್ನು ಮರೆತು ಒಗ್ಗೂಡುವಂತೆ ಮಾಡಲಾಗಲ್ಲಿಲ್ಲಾ, ಜಾತಿಯು ಹುಟ್ಟಿನ ಮೇಲೆ ನಿರ್ಧಾರಿತವಾಗುವುದನ್ನು ನಿರ್ನಾಮ ಮಾಡಲಾಗಲಿಲ್ಲ, ಮತಾಂತರವನ್ನು ಖಂಡಿಸದ ಭಾರತೀಯ ಸಮಾಜದ ಅನೇಕ ಹೊಸ ಹೊಸ ಮತಗಳು ಸ್ಥಾಪಿತವಾಗಿವೆ, ಇದರಲ್ಲಿ ಅನೇಕರು ಒಂದು ಮತವನ್ನು ಬಿಟ್ಟು ಇನ್ನೊಂದು ಮತಕ್ಕೆ ಸೇರಿಕೊಂಡಿದ್ದಾರೆ. ಆದರೆ ಅವರನ್ನು ಅವರ ಜಾತಿಗಳು ಅಂಟಿಕೊಂಡೆ

ಬಂದಿವೆ . ಪೂಜಿಸುವ ದೈವ ಆಚರಣೆಗಳು, ಬದಲಾಗಬಹುದು ಆದರೆ ಒಂದು ಜಾತಿಯಿಂದ ಮತ್ತೊಂದು ಜಾತಿ ಅನೇಕ ಪ್ರಸಿದ್ಧ ವ್ಯಕ್ತಿಗಳು ಮತಾಂತ ಹೊಂದಿರುವ ಉಲ್ಲೇಖಗಳ ಜೊತೆಗೆ. ಅವರ ಹಿಂದಿನ ತಮ್ಮ ಜಾತಿಯ ವಾಸನೆಯನ್ನು ಬಿಟ್ಟಿಲ್ಲ ಎಂಬದು ನಮಗೆ ಗೋಚರವಾದ ಸತ್ಯವಾಗಿದೆ. ಜಾತಿ ಪದ್ಧತಿಯನ್ನು ಕುರಿತು ಗಂಭೀರವಾಗಿ ಆಲೋಚನೆ ಮಾಡುವ ಎಲ್ಲಾ ವಿವೇಕಿಗಳನ್ನು ಇದು ಚಿಂತೆಗೀಡು ಮಾಡುತ್ತದೆ. ಹೊಸ ಮತವೊಂದರ ಪ್ರಸಾರ ಕಾರ್ಯದಲ್ಲಿ ವಚನಕಾರರನ್ನು ಎದುರಿಸಿದ ಪೆಡಂಭೂತವೆಂದರೆ ಈ ಜಾತಿ ಪ್ರಶ್ನೆ. ಆದರೆ ವಚನಕಾರರು ಸಮ್ರಗವಾಗಿ ಇಂತಹ ಸಂದಿಗ್ದ ಸ್ಥಿತಿಯನ್ನು ನಿಬಾಯಿಸಿಕೊಂಡು ನಿಲ್ಲುವ ಸ್ಥೈರ್ಯದ ಕಾರ್ಯದಲ್ಲಿ ಯಶಸ್ವಿಗಳಾಗುತ್ತಾರೆ.

ಕರ್ನಾಟಕ ಜನ ಸಮುದಾಯವನ್ನು ಆಕರ್ಷಿಸಿದ್ದು ಬಸವಾದಿ ಶರಣರ, ಜಾತಿ ರಹಿತ ಆದರ್ಶ ಯುತವಾದ ಸಮಾಜದ ಕಲ್ಪನೆ. ಇದರಿಂದಾಗಿ, ವಿಶೇಷವಾಗಿ ಕೆಳವರ್ಗದ ಜನರು ನಾನಾ ಜಾತಿಗಳು ಶೂದ್ರವರ್ಗದ ಜನರು, ಬಂದು ಈ ಚಳುವಳಿಯಲ್ಲಿ ಭಾಗವಹಿಸುತ್ತಾರೆ. ಇದಕ್ಕೆ ಮುಖ್ಯಕಾರಣ ವೀರಶೈವ ಪಂಥದ ಜಾತಿ ರಹಿತ ಸಮಾಜದ ಕಲ್ಪನೆಯೇ ಎಂದರೆ ತಪ್ಪಾಗಲಿಕ್ಕಿಲ್ಲ. ಸಮಾಜದಲ್ಲಿ ಕೀಳಾಗಿ ಕಾಣಲಾಗುತ್ತಿದ್ದ ಅನೇಕ ಸಮುದಾಯಗಳು . ಇಂಥ ಸಂದರ್ಭವನ್ನು ಕಾದು ಕುಳಿತವರಂತೆ ಸ್ವಾಗತ ಮಾಡಿಕೊಂಡರು. ಅಲ್ಲದೆ, ಶರಣರು ಹೊಸದೊಂದು ಸಮಾಜವನ್ನು ಕಟ್ಟಿದ್ದರಿಂದ ಸಾಮಾನ್ಯರಿಗೆ ತಮ್ಮ ಜೀವನ ಮಟ್ಟದ ಸುಧಾರಣೆ ಮಾಡಿಕೊಳ್ಳುದಕ್ಕೆ ಒಂದು ಯೋಗ್ಯ ವೇದಿಕೆಯೊಂದು ದೊರೆತಂತಾಯಿತು ಜೊತೆಗೆ ಜೀವನದಲ್ಲಿ ಇನ್ನೊಬ್ಬರ ಸೇವೆಯನ್ನು ಪರಮ ಗುರಿ ಎಂಬಂತೆ ಪರರಏಳಿಗೆಗಾಗಿ ತಮ್ಮನ್ನು ತಾವು ಸಮರ್ಪಿಸಿಕೊಂಡಿದ್ದ, ನೊಂದ ಬೆಂದ ಹೃದಯಗಳಿಗೆ ಒಂದು ಆಶಾಭಾವನೆ ಮೂಡುವಂತಾಯ್ತು ಇಂತಹ ವರ್ಗದ ಜನರಿಗೆ ತಾವು ಇತರರಂತೆ ಸಮಾನ ಸ್ಥಿತಿಯಲ್ಲಿ ಸಮಾನತೆಯಲ್ಲಿ ಬದುಕುವ ಕಲ್ಪನೆ ಬೆಳೆದಿರಬೇಕು. ಎಲ್ಲಾ ಸಮುದಾಯದಿಂದ ಆರಿಸಿಕೊಂಡು ಸಂಘಟನೆಯಲ್ಲಿ ಬಸವಣ್ಣ ಹಾಗೂ ಶರಣರು ಜನರನ್ನು ಕರೆತಂದರೇನೋ? ಎಂಬಂತೆ ಕಂಡರೂ, ಅವರು ಮನವೊಪ್ಪಿ ಅಥವಾ ಸ್ವಯಂಪ್ರೇರಿತರಾಗಿ ಈ ಚಳುವಳಿಯಲ್ಲಿ ಭಾಗವಹಿಸಿದ್ದನ್ನು ನಾವು ನೋಡ ಬಹುದಾಗಿದೆ. ಬಸವಣ್ಣ ನವರು ವೃತ್ತಿಗಳೆ ಜಾತಿಗಳ ಪ್ರಬೇದಕ್ಕೆ ಕಾರಣವಾಗಿದೆ ಎಂಬ ಅಂಶವನ್ನು ಹೇಳುತ್ತಾನೆ.

ಹೊಲೆಗಂಡಲ್ಲದೆ ಪಿಂಡದ ನೆಲೆಗಾಶ್ರಯವಿಲ್ಲ.

ಜಲ-ಬಿಂದುವಿನ ವ್ಯವಹಾರ ಒಂದೇ,

ಆಶೆಯಾಮಿಷ ರೋಷ ಹರುಷ ವಿಷಯಾದಿಗಳೆಲ್ಲ ಒಂದೇ

ಏನ ನೋಡಿ, ಏನ ಕೇಳಿ, ಏನು ಫಲ?

ಕುಲಜನೆಂಬುದಕ್ಕೆ ಆವುದು ದೃಷ್ಟ ?

ಸಪ್ತದಾತುಸಮಂ ಪಿಂಡಂ ಸಮಯೋಗಿಸಮದ್ಭವಂ ।

ಆತ್ಮ–ಜೀವಸಮಾಯುಕ್ತಂ ವರ್ಣಆನಾಂ ಕಂ ಪ್ರಯೋಜನಂ॥ ಎಂಬುದಾಗಿ
ಕಾಸಿಕಮ್ಮಾರನಾದ, ಬೀಸಿ ಮಡಿವಾಳನಾದ,
ಹಾಸನಿಕ್ಕೆ ಸಾಲಿಗನಾದ, ವೇದವನೋಡಿ ಹಾರುವನಾದ
ಕರ್ಣದಲ್ಲಿ ಜನಿಸಿದವರುಂಟೆ ಜಗದೊಳಗೆ?
ಇದು ಕಾರಣ ಕೂಡಲಸಂಗಮದೇವಾ,
ಲಿಂಗಸ್ಥಲವನರಿದವನೆ ಕಲಜನು.

(ಬಸವಣ್ಣನವರ ವಚನ ಸಂಪುಟ ವಚನ ಸಂಖ್ಯೆ –೫೯೦)

ಎಂಬಲ್ಲಿ ವೃತ್ತಿಗಳೇ ಜಾತಿಗಳಾಗಿ ಹುಟ್ಟಿಕೊಂಡಿದೆ
ವ್ಯಾಸ ಭೋಯಿತಿಯ ಮಗ
ಮಾರ್ಕಂಡೇಯ ಮಾತಂಗಿಯ ಮಗ
ಮಂಡೋಧರಿ ಕಪ್ಪೆಯಮಗಳು
ಕುಲವನರಸದಿರಿಂಭೋ! ಕುಲದಿಂ ಮನ್ನೇನಾದಿರಿಂ ಭೋ!
ಸಾಕ್ಷಾತ್ ಅಗಸ್ತ್ಯ ಕಬ್ಬಿಲ
ದೂರ್ವಾಸ ಮಚ್ಚಿಗ, ಕಶ್ಯಪ ಕಮ್ಮಾರ,
ಕೌಂಡಿನ್ಯನೆಂಬ ಋಷಿ ಮೂರುಭುವನವನರಿಯೆ ನಾವಿದಕಾಣೀಂ ಭೋ!
ನಮ್ಮ ಕೂಡಲಸಂಗನ ವಚನವಿಂತೆಂದುದು.
ಶ್ವಪಚೋಪಿಯಾಡೇನು ಶಿವಭಕ್ತನೆ ಕುಲಜಂ ಭೋ!

(ಬಸವಣ್ಣನವರ ವಚನ ಸಂಪುಟ ವಚನ ಸಂಖ್ಯೆ – ೫೮೯)

ಎಂಬ ಭಾವನೆಯನ್ನು ಅವರು ಸ್ಪಷ್ಟಪಡಿಸಿದ್ದಾರೆ. ಅದೇ ವಚನದಲ್ಲಿ "ಕಿವಿಯಲ್ಲಿ ಜನಿಸಿದವರುಂಟೆ?" ಎಂದು ಹೇಳುವುದರ ಮೂಲಕ ಹುಟ್ಟಿನಿಂದ ಯಾರು ಶ್ರೇಷ್ಠರಲ್ಲ ಯಾರೂ ಕನಿಷ್ಠರಲ್ಲಿ ಎಲ್ಲರು ಸಮಾನರು ಎಂಬ ಧ್ವನಿಯನ್ನು ನಾವು ಕಾಣಬಹುದಾಗಿದೆ.

ಬಸವಣ್ಣ ಹಾಗೂ ಶರಣರು ಈ ಸಮಾನತೆಗಾಗಿ ಹೋರಾಡ ಬೇಕಾಗಿದ್ದುದೇಕೆ? ವೀರಶೈವಕ್ಕೆ ಅದರ ಹೊಸತನದಿಂದ ಆಕರ್ಷಿತವಾಗಿ ಬಂದ ಜನರು ತಮ್ಮ ಪೂರ್ವಾಶ್ರಮದಲ್ಲಿ ನಾನಾ ವರ್ಗ ಜಾತಿಗಳಿಗೆ ಸೇರಿದ್ದವರು. ಆದ್ದರಿಂದ ಹಿಂದೆ ಮೇಲ್ಜಾತಿಯವರಾಗಿದ್ದವರು ಹಿಂದೆ ಕೀಳು ಜಾತಿಯವ ನೆನೆಸಿಕೊಂಡವನನ್ನು ಸಮಾನತೆಯಿಂದ ಕಾಣುತ್ತಿರಲ್ಲಿಲ್ಲಾ ಇಂತಹ ಸಂದರ್ಬದಲ್ಲಿ ಬಸವಣ್ಣ ಈ ಸಮಾನತೆಗಾಗಿ ಹೊರಾಡಬೇಕಾಯ್ತು ಎಂದು ಹೇಳಬಹುದಾಗಿದೆ.

ಇದಕ್ಕೆ ಬಸವಣ್ಣ ಮಾತನನ್ನೇ ನೋಡಬಹುದು.

"ಎಂಬುದು ಉಡುವುದು ಶಿವಪಾರಿಚಾರ ಕೊಂಬುದು ಕೊಡುವುದು ಕುಲಾಚಾರ" ಕೊಂಬಲ್ಲಿ ಕೇಡುವಲ್ಲಿ ಕುಲವನರಸುವವರು ಎಂತಯ್ಯ ಅವರ ಭಕ್ತರೆಂಬ? ಎಂತಯ್ಯ ಎಂಬ ವಚನದಲ್ಲಿ ವೈವಾಹಿಕತೆಯಲ್ಲಿ , ಜಾತಿಪದ್ಧತಿಯು ಅಡ್ಡಿಪಡಿಸುತ್ತಿದ್ದುದು ಸ್ಪಷ್ಟವಾಗಿ ಕಾಣಿಸುತ್ತದೆ.

ಎಂಥಯ್ಯ ಅವರ ಯುಕ್ತರೆಂಬೆ? ಎನ್ನುವ ಮಾತಿನಲ್ಲಿ ಬಸವಣ್ಣನ ಆರ್ತ ಧ್ವನಿಯು ಜಾತಿ ಪದ್ಧತಿಯನ್ನು ಕುರಿತು ಆತನ ದುಖಃ ಭಾವನೆ ವ್ಯಕ್ತವಾಗಿರುವುದು ನಮಗೆ ಕಾಣುತ್ತದೆ. ಪ್ರಾಯಶಃ , ಜಾತಿಯ ಬಸವಣ್ಣನನ್ನು ಬಿಡದೆ ಕಾಡಿತ್ತೇನೋ ಹಾಗಾಗಿ ಸ್ವತಃ ಬಸವಣ್ಣನೆ ಈ ರೀತಿ ಹೇಳಿಕೊಂಡಿದಿದ್ದಾನೆ ಜೊತೆಗೆ ತನನ್ನು ಹಾಗೂ ತನ್ನ ಅಂತರಾತ್ಮದ ಸಾಧನಗೆ ಅರ್ಪಿಸಿಕೊಳ್ಳುವ ವಿಧಾನವನ್ನು ಈ ರೀತಿ ಮಾಡಿಕೊಂಡು ಒಂದು ಆದರ್ಶಯುತ ಸಮಾಜದ ನಿರ್ಮಾಣಕ್ಕೆ ರೂಪರೇಷವನ್ನು ಕೊಡುತ್ತಾನೆ. ತಾನು ಬ್ರಾಹ್ಮಣನು ಎಂಬ ಭಾವನೆ ಅತನಿಗೆ ಕಾಡಿರಬೇಕು ಅಥವಾ ಸಮಾಜದಲ್ಲಿ ಇತತರು ಆತನನ್ನು ಉಚ್ಚಕುಲದವನೆಂದು ಗುರುತುಮಾಡಿ ತೋರಿಸುವ ಯತ್ನದಲ್ಲಿ ತೊಡಗಿದ್ದಿರಬಹುದು ಆದ್ದರಿಂದ ಈ ರೀತಿಯಾಗಿ ಬಸವಣ್ಣ ತನ್ನ ನಿಲುವನ್ನು ಸ್ಪಷ್ಟಿಕರಿಸುತ್ತಾನೆ.

ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ

ಕಷ್ಟತನದ ಹೊರೆಯ ಹೊರಿಸದಿರಯ್ಯ

ಕಕ್ಕಯ್ಯನೊಕ್ಕೊದನಿಕ್ಕ ನೋಡಯ್ಯ,

ದಾಸಯ್ಯ ಶಿವದಾನವನೆರೆಯ ನೋಡಯ್ಯ,

ಮನ್ನಣೆಯ ಚೆನ್ನಯ್ಯ ನೆನ್ನುವ ಮನ್ನಿಸ,

ಉನ್ನತ ಮಹಿಮ

ಕೂಡಲ ಸಂಗಮದೇವಾ . ಶಿವಧೋ ಶಿವಧೋ ॥

(ಬಸವಣ್ಣನವರ ವಚನ ಸಂಪುಟ ವಚನ ಸಂಖ್ಯೆ – ೩೪೪)

ಸೆಟ್ಟಿಯೆಂಬೆನೆ ಸಿರಿಯಾಳನ?

ಮಡಿವಾಳನೆಂಬೆನೆ ಮಾಚಯ್ಯನ?

ಡೋಹರನೆಂಬೆನೆ ಕಕ್ಕಯ್ಯನ?

ಮಾದಾರನೆಂಬೆನೆ ಚನ್ನಯ್ಯನ?

ಆನು ಹಾರುವನೆಂದೆಡೆ ಕೂಡಲ ಸಂಗಯ್ಯ ನಗುವನಯ್ಯ.

(ಬಸವಣ್ಣನವರ ವಚನ ಸಂಪುಟ ವಚನ ಸಂಖ್ಯೆ – ೩೪೫)

ಮುಂತಾದ ವಚನಗಳನ್ನು ನೋಡಿದಾಗ ಬಸವಣ್ಣನ ಅಂತರಂಗದ ಯಾವುದೋ ಮೂಲೆಯಲ್ಲಿ ತನ್ನ ಜಾತಿ ಗರ್ವವನ್ನು ಅಥವಾ ಮನೋಬಾವವನ್ನು ತಾನೇ ಪ್ರಜಾಪೂರ್ವಕವಾಗಿ ಖಂಡಿಸುತ್ತಿರುವುದು ಎದ್ದು ಕಾಣುತ್ತದೆ. ಅಲ್ಲದೆ ಸಾಮಾಜಿಕ ಸ್ಥಿತ್ಯಂತರದಲ್ಲಿ ಇಂತಹ ದೊರಣೆ ಅವಶ್ಯಕವೆನಿಸುವಂತಿದೆ. ಜೊತೆಗೆ ಅಂದಿನ ವಿಷಮ ಪರಿಸ್ಥಿಯಲ್ಲಿ ಸಮಾಜದಲ್ಲಿ ಸಮಾನತೆಯ ತತ್ವವನ್ನು ಸಾರುವ ದೃಷ್ಟಿಕೋನದ ವಚನಗಳು ಉದಯಿಸಿದ್ದು ಒಂದು ಸಮಾಜದ ಜನರು ನಂಬಿಕೊಂಡಿದ್ದ ಹಲವಾರು ಜಾತಿ ಪದ್ದತಿಯನ್ನು ಸುಳ್ಳುಮಾಡುವ ಅಥವಾ ಅಂತಹ ಹೇಯ, ಆಚರಣೆಗಳನ್ನೊಳಗೊಂಡ ಪದ್ದತಿಯನ್ನು ನಿರ್ನಾಮ ಮಾಡುವ ಸಲುವಾಗಿ ಇಂತಹ ರೀತಿಯ ವಚನಗಳನ್ನು ಬಸವಣ್ಣ ರಚಿಸಿಕೊಟ್ಟಿದ್ದಾನೇನೋ ಎಂದೆನಿಸದೆ ಇರದು.

ವಚನಾಕಾರರು ಜಾತಿಗಳು ಜಾತಿ ಪದ್ದತಿಯು, ವರ್ಣವ್ಯವಸ್ಥೆಯು ಸಂಪೂರ್ಣವಾಗಿ ನಿರ್ನಾಮವಾಗಬೇಕಾದರೆ ಸಮಾನತೆ ಸಮಾಜದಲ್ಲಿ ನಲೆಯೂರಿ ಶಾಂತಿ ನೆಮ್ಮದಿಗಳು ನೆಲಸಬೇಕಾದರೆ ಎಲ್ಲರು ಸಮಾನರು ಎಂದು ಹೇಳುವ ಒಂದು ಆಚಾರ ಬೇಕು. ಘೋಷವಾಕ್ಯಬೇಕೆಂದು ಹೊಸ ಬಗೆಯಲ್ಲಿ ಪ್ರಯತ್ನಿಸಿ  ಯಶಸ್ವಿಯಾಗಿರುತ್ತಾರೆ . ನಂತರ ಇದಕ್ಕಿಂತ ಒಂದು ಹೆಜ್ಜೆ ಮುಂದೆ ಹೋಗಿ ಆಧುನಿಕ ಜಗತ್ತಿನಲ್ಲಿ ಸಾಧ್ಯವಾಗದಂತಹ ಹೊಸ ಚಿಂತನೆಯನ್ನು ಮಾಡಿ ಅಂತಜಾರ್ತಿಯ ವಿವಾಹ ಪದ್ದತಿಯನ್ನು ರೂಪಿಸುತ್ತಾರೆ .ಅಲ್ಲದೆ ಇದೊಂದು ಯೋಗ್ಯವಾದ ಬಗೆಯೆಂದು ಭಾವಿಸಿದ್ದರು, ಇದು ಬಸವಣ್ಣನ ನಿಲುವು ಕೂಡ ಆಗಿತ್ತು. ಆದರೆ ಅವರಲ್ಲಿ ಕೆಲವರು ಬಸವಣ್ಣ ನ ಇಂತಹಾ ನಿರ್ಧಾರ ನಿಲುವುಗಳಿಗೆ ವಿರೋದ ಇತ್ತು ಜೊತೆಗೆ ಇಂತಹ ಘಟನೆಯನ್ನು ಸಹಿಸಲಾರದ ಸಂಪ್ರಾದಾಯಕತೆಯುಳ್ಳ ಕೆಲವು ಮನಸ್ಸುಗಳು ತತ್ತರಿಸಿ ಹೋದವು. ಇದರಿಂದ ಮುಂದೆ ರಕ್ತಪಾತವೆ ಆಗುತ್ತದೆ ಇದರಿಂದ ಬಸವಣ್ಣನವರ ಹಾಗೂ ವಚನಕಾರರು  ಕಟ್ಟಿದ ಜಾತ್ಯಾತೀತ ಬಾವನೆಯ ಸೌದವು ಕಳಚಿಬಿದ್ದು ಹೋಯಿತು. ಇದರಿಂದ ಕೆಲವು ಸಂಪ್ರದಾಯ ಶೀಲ ಮನಸ್ಸಿನವರು ತಮ್ಮ ಹಿಂದಿನ ಜೀವನದ ಹಾದಿಯನ್ನು ಹಿಡಿದರು. ವಚನಕಾರರು ಸ್ತ್ರೀಯನ್ನು ತಮ್ಮ ಚಳುವಳಿಯಲ್ಲಿ ಸೇರಿಸಿಕೊಳ್ಳುವುದರ ಜೊತೆಗೆ ಒಂದು ಹೊಸ ಅಧ್ಯಾಯವನ್ನೇ ಪ್ರಾರಂಭಮಾಡಿದರು. ಕೇವಲ ಭಾರತದ ಇತಿಹಾಸದಲ್ಲಿ ಮಾತ್ರವಲ್ಲ, ಇಡಿ ಪ್ರಪಂಚದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ಸ್ವಾತಂತ್ರತೆಯಿಂದ, ಸಾಮಾಜಿಕ, ಧಾರ್ಮಿಕ ಕ್ರಾಂತಿಯಲ್ಲಿ ಭಾಗವಹಿಸಿದ್ದು ೧೨ನೇ ಶತಮಾನದ ಶರಣ ಚಳುವಳಿಯಲ್ಲಿ ಎಂಬ ವಿದ್ವಾಂಸರ ಮಾತು ಸತ್ಯವೂ ಕೂಡ ಆಗಿದೆ.

ವೈದಿಕ, ಜೈನ, ಬೌದ್ದ ಮುಂತಾದ ಧರ್ಮಗಳು ಸ್ತ್ರೀಗೆ ಕನಿಷ್ಟ ಸ್ಥಾನಮಾನವನ್ನು ಒಪ್ಪಿಕೊಂಡು ಬಂದಿದ್ದವು, ಅವಳಿಗೆ ಧಾರ್ಮಿಕವಾದ ಸ್ವತಂತ್ರ್ಯವಾಗಲಿ  ಸಾಮಾಜಿಕ ಸ್ಥಾನಗಳಾಗಲಿ ನೀಡದೆ ಅವಳಿಗೆ ಸ್ವಂತ ಅಲೋಚನೆಯ ಶಕ್ತಿ ಇಲ್ಲ ಎಂದು, ಅವಳಿಗೆ ದರ್ಮದಲ್ಲಿ ಪ್ರವೇಶವಿಲ್ಲ ಅವಳದು ಕೇವಲ ಜೀತಪದ್ದತಿಯಂತೆ. ಗಂಡಿನ ಸೇವಕಳಾಗಿ, ಮಕ್ಕಳ ಹೇರುವ ಯಂತ್ರವಾಗಿ ಇರಬೇಕಾದಂತಹ ಸ್ಥಿತಿಯು ನಿರ್ಮಾಣವಾಗಿತ್ತು. ಅವಳಿಗೆ

ವೈಚಾರಿಕ ಮನೋಭಾವಯಿಲ್ಲ ಎಂದು ಅವಳನ್ನು ಜರಿದು ನಿಕೃಷ ಸ್ಥಿತಿಗೆತಳ್ಳಿ ದಲಿತರಿಗಿಂತಲೂ ಕೆಳಸ್ಥರದ ರೀತಿಯಲ್ಲಿ ಅವಳನ್ನು ಕಾಣಲಾಗುತ್ತಿತ್ತು. ಇದರಿಂದ ಸ್ತ್ರೀ ಸಂಕುಲವು ತಾವು ಒಂದು ವಸ್ತುಗಳಾಗಿ ಮಾರ್ಪಾಟ್ಟು ಕೇವಲ ಗಂಡಿನ ಸೇವೆಯಲ್ಲಿ ಬದುಕನ್ನು ಸಾಗಿಸುತ್ತಾ ದುಸ್ತರ ಜೀವನ ಸಾಗಿಸಬೇಕಾಗಿತ್ತು. ಇದರಿಂದ ಕೆಲವು ಸಂವೇದನಾಶೀಲ ಮನೋಭಾವದ ಕೆಲವು ಮಹಿಳೆಯರು ಪ್ರತಿಭಟಿಸುವ ಯತ್ನದಲ್ಲಿ ತೊಡಗಿದರು ಆದರು ಅದು ಸಾಧ್ಯವಾಗದಂತ ಸ್ಥಿತಿ ನಿರ್ಮಾಣವಾಗಿತ್ತು . ಕೇವಲ ಸಂಪ್ರದಾಯ ಶೀಲ ಮನೋಧರ್ಮದವರ ಶೋಷಣೆ ದಬ್ಬಾಳಿಕೆಯನ್ನು . ಸಹಿಸಿಕೊಂಡ ಜೀವನ ನಿರ್ವಹಣೆ ಮಾಡುತ್ತಿದ್ದ ಮಹಿಳೆ ಶರಣ ಆಂದೋಲನದಲ್ಲಿ ಪ್ರಗತಿಪರ ಚಿಂತನೆಯಲ್ಲಿ ಭಾಗವಹಿಸಿ ಸಾಮಾಜಿಕ ಸ್ಥಾನಮಾನವನ್ನು ಗಳಿಸಿಕೊಂಡಳು. ಹೆಣ್ಣನ್ನು ಹಿಂದಿನ ಸಂಪ್ರದಾಯಶೀಲ ಸಮಾಜವು ಮಾಯೆ ಎಂದು ಅವಳಿಗೆ ಸ್ಥಾನಮಾನವನ್ನು ನಿರಾಕರಿಸಿದ್ದವು ಆದರೆ ವಚನಕಾರರು ಹೆಣ್ಣ ಮಾಯೆಯಲ್ಲಾ ಅವಳಿಗೆ ಒಂದು ಮನಸ್ಸುಂಟು ಅವಳು ಮನುಷ್ಯರ ಜಾತಿಗೆ ಸೇರಿದವಳು ಎಂದು ಅವಳಿಗೆ ಪುರುಷರಷ್ಟೆ ಸಮಾನವಾದ ಸ್ಥಾನಮಾನ ನೀಡಿದರು. ಇದಕ್ಕೆ ನಿರ್ದಶನವೆಂದರೆ ಆದ್ಯ ವಚನಕಾರರಾದ ಜೇಡರ ದಾಸಿಮಯ್ಯನ ಈ ವಚನ

"ಮೊಲೆ ಮುಡಿ ಬಂದರೆ ಹೆಣ್ಣೆಂಬರು
ಗಡ್ಡ ಮೀಸೆ ಬಂದರೆ ಗಂಡೆಂಬರು
ನಡುವೆ ಸುಳಿವಾತ್ಮ ಹೆಣ್ಣು ಅಲ್ಲ ಗಂಡು ಅಲ್ಲ
ಕಾಣ ರಾಮನಾಥ"

ಈ ರೀತಿ ಮಾತುಗಳು ದೇಹದ ರೂಪದಲ್ಲಿ ಗಂಡು ಹೆಣ್ಣು ಎಂದು ರಚನೆಯಾಗಿದೆ ಹೊರತು ಆಂತರಿಕ ಯೋಗ್ಯತೆಗೆ ಸಂಬಂದಿಸಿಲ್ಲ ಎಂಬ ಮಾತು ಇದಾಗಿದೆ. ಗಂಡು ಹೆಣ್ಣು ಎಂಬ ಬೇಧವಿಲ್ಲದೆ ಸಮಾನತೆಯಿಂದ ಮಾತ್ರ ನೆಮ್ಮದಿಯ ಸ್ವಚ್ಚ ಜೀವನ ಸಾದ್ಯ ಎಂಬ ತಾತ್ವಿಕತೆಯ ನಿಲುವನ್ನು ಶರಣರುರೂಪಿಸಿಕೊಟ್ಟರು. ಇದರಿಂದ ಸಮಾಜದಲ್ಲಿ ಹಿಂದುಳಿದ ವರ್ಗದ ಕೆಳಸ್ತರದ ಮಹಿಳೆಯರು ವಿವಿದ ಕಾಯಕವನ್ನು ಮಾಡುವಂತ ಮಹಿಳೆಯರಿಗೆ ಈ ಚಳುವಳಿಯಲ್ಲಿ ಭಾಗವಹಿಸುವ ಅವಕಾಶ ದೊರೆಯಿತು ಅಲ್ಲದೆ ಸಮಾನತೆಯು ನೆಲೆಗೊಂಡಿತು ಎಂದು ಹೇಳಬಹುದು. ಇದರಿಂದ ಸತಿ ಪತಿಗಳು ಪುರುಷ ಸ್ತ್ರೀಯು ಪರಸ್ಪರ ಸಮಾನರು ಎಂಬ ಮನೋಭಾವ ಬೆಳೆಯಿತು. ಅಲ್ಲದೆ, "ಸತಿ ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ", ಎಂಬ ಮಾತು ಇಬ್ಬರ ಸಮಾನ ಜವಾಬ್ದಾರಿಯನ್ನು ಸೂಚಿಸುತ್ತದೆ. ಹೆಣ್ಣಿಗೆ ಸಮಾಜದಲ್ಲಿ ಸಮಾನತೆ ದೊರಕಿದ್ದರಿಂದ ಶರಣರ ಚಳುವಳಿಯಿಂದ ಸ್ತ್ರೀಗೆ ಒಂದು ಬಗೆಯಲ್ಲಿ ಸ್ವತಂತ್ರ್ಯ ದೊರೆತು. ಅವರಿಗೆ ಆತ್ಮವಿಶ್ವಾಸ ಮೂಡಲು ಪ್ರಾರಂಭವಾಯಿತು. ಅವಳಿಗೆ ತನ್ನದೆ ಆದ ದಾರಿಕಾಣತೊಡಗಿತು. ಇದರಿಂದ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ಈ ಆಂದೋಲನಕ್ಕೆ ಸ್ವಾಗತ ಕೋರಿ, ಇದರಲ್ಲಿ ಭಾಗವಹಿಸಿ ವ್ಯಾಪಕ ಬೆಂಬಲ ನೀಡಿದರೆಂದು ತೋರುತ್ತದೆ. ಏಕೆಂದರೆ ೩೩ರಕ್ಕೂ ಹೆಚ್ಚು ವಚನಾಕಾರ್ತಿಯರ ವಚನಗಳು ಲಭ್ಯವಾಗಿರುವುದೆ ಮುಖ್ಯ ಆಧಾರವಾಗಿ ನಿಂತಿದೆ.

೧೨ನೇ ಶತಮಾನಕ್ಕೂ ಹಿಂದೆ ಸಮಾಜದಲ್ಲಿನ ಜಾತಿ ವಿಷಮತೆಗೆ ವೃತ್ತಿಗಳ ಬಗೆಗಿನ ತಾರಾತಮ್ಯ ಭಾವನೆಯೇ ಮೂಲಕಾರಣ , ಏಕೆಂದರೆ ಸುಮಾರು ವೇದಗಳ ಕಾಲದಿಂದಲೂ ವ್ಯಕ್ತಿ ತಾನು ಮಾಡುವ ಕೆಲಸದಿಂದ ಅವನ ಜಾತಿ ನಿರ್ದಾರವಾಗಿ ಬಿಡುತ್ತಿತ್ತು. ಅಲ್ಲದೆ ಚಾತುರ್ವರ್ಣ ವರ್ಗ ಪದ್ಧತಿಯಿದ್ದುದ್ದರಿಂದ ಬ್ರಾಹ್ಮಣ, ಕ್ಷತ್ರಿಯ ವೈಶ್ಯರು ಮೇಲಿನವರಾಗಿ ಶೋಷಣೆ ಮಾಡುವ ವರ್ಗವಾದರೆ , ಶೂದ್ರರು ಹಾಗೂ ಅತ್ಯಂತ ಕೆಳಸ್ತರದ ಪಂಚಮರು ಶೋಷಣೆಗೆ ಒಳ ಪಡುವ ವರ್ಗವಾಗಿ ಸಮಾಜದಲ್ಲಿ ಅತ್ಯಂತ ಹೇಯವಾದ ಸ್ಥಾನದಲ್ಲಿ ಇರುವಂತಹಾ ಪರಿಸ್ಥಿಯು ಕೆಳಸ್ತರದ ವಿವಿದ ವೃತ್ತಿಗಳನ್ನು ಮಾಡುವ ಜಾತಿಯವರಿಗೆ ಇರುತ್ತಿತ್ತು. ಆದರೆ ೧೨ನೇ ಶತಮಾನದಲ್ಲಿ ಬಸವಣ್ಣ ನೇತ್ರತ್ವದ ಚಳುವಳಿಯು ಇಂತಹ ಅನೇಕ ವೃತ್ತಿಗಳಲ್ಲಿ ತೊಡಗಿಕೊಂಡಿದ್ದ ಕೆಳಸ್ತರದ ಹಾಗೂ ಶೂದ್ರರು ಮತ್ತು ಪಂಚಮರು ಈ ಚಳುವಳಿಯನ್ನು ಸ್ವಾಗತಿಸಿ ಸ್ವೀಕರಿಸಿ ಬೆಂಬಲ ನೀಡಿದ್ದರಿಂದ ಸಮಾನತೆಯ ಕನಸು ಕಾಣುತ್ತಿದ್ದ ಬಸವಣ್ಣ ಹಾಗೂ ಶರಣರು ವೃತ್ತಿಯನ್ನು ಕೇವಲ ಆರ್ಥಿಕವಾಗಿ ಅವಲಂಬಿಸದೆ ಅದೊಂದು ಪವಿತ್ರ ಕರ್ತವ್ಯವೆಂದು ಸಾರಿ ಹೇಳಿದರು ಇದರಿಂದ ಕೇವಲ ತಮ್ಮ ಉಪಜೀವನಕ್ಕೆ ಆದಾರವಾದ ಹೊಟ್ಟೆ ತುಂಬಿಸಿಕೊಳ್ಳುವುದಕ್ಕೆ ಮಾಡುತ್ತಿದ್ದ ವೃತ್ತಿಗಳು ಕಾಯಕವಾಗಿ ಮಾರ್ಪಟ್ಟವು ಒಂದು ಆಧ್ಯಾತ್ಮಿಕ ಅರ್ಥವನ್ನು ಈ ಕಾಯಕಕ್ಕೆ ಶರಣರು ನೀಡಿ ಇದೊಂದು ಪವಿತ್ರ ಕಾರ್ಯವೆಂದು ಬಿಂಬಿಸಿದರು. ಇದಕ್ಕೆ ಬಸವಣ್ಣನವರು ***'ಕಾಯಕವೇ ಕೈಲಾಸ'*** ಎಂದು ಇಹ ಮತ್ತು ಪರಬೇರಲ್ಲ ಎರಡು ಇಲ್ಲಿಯೇ ಇವೆ "ಇಲ್ಲಿಸಲ್ಲುವವರು ಅಲ್ಲಿಯು ಸಲ್ಲುವರು" ಎಂದು ಮನುಷ್ಯನು ತಾನು ಹುಟ್ಟಿನಿಂದ ದೊಡ್ಡವನಲ್ಲ ವೃತ್ತಿಯಿಂದ ದೊಡ್ಡವನು ಎಂದು ಸಮಾಜದಲ್ಲಿನ ಎಲ್ಲಾ ಕಾಯಕಗಳು ವೃತ್ತಿಗಳು ಶ್ರೇಷ್ಠವಾದುವುಗಳು ಇವುಗಳಲ್ಲಿ ಯಾವ ವೃತ್ತಿಯು ಕೀಳಲ್ಲ ಯಾವ ವೃತ್ತಿಯು ಮೇಲ್ಲಲಾ ಎಂದು ಹೇಳಿದರು. ಇದರಿಂದ ಸಮಾಜದಲ್ಲಿನ ಎಲ್ಲರು ವೃತ್ತಿಯಲ್ಲಿ ತೊಡಗಿಕೊಂಡರು ಇದು ಪವಿತ್ರ ಕಾರ್ಯವೆಂಬಂತೆ ಮೇಲು – ಕೀಳು ಎಂಬ ಭಾವನೆಯನ್ನು ದೂರಿಕರಿಸಿ ಸಮಾನತೆಯ ದೃಷ್ಟಿಯಿಂದ ಕಾಯಕಮಾಡಿ. ಸಮಾಜ ಇತರ ನಿಸ್ಸಾಯಕ ವರ್ಗಕ್ಕೆ ಹಂಚಿಕೆ ಮಾಡಿಕೊಂಡು ಉಪಯೋಗಿಸುತ್ತಿದ್ದರಿಂದ ಬಡವ– ಬಲ್ಲಿದವರ ನಡುವಿನ ತಾರತಮ್ಯ ಭಾವನೆ ಕೀಳರಿಮೆ ದೂರವಾಯಿತು. ಜೊತೆಗೆ ಅವಶ್ಯಕತೆಗಿಂತ ಹೆಚ್ಚು ಇಟ್ಟುಕೊಂಡಿರುವುದು ಅಕ್ಷಮ್ಯ ಅಪರಾದ ಎಂದು ಹೇಳಿದರು. ಇದರಿಂದ ಆಸ್ತೀಯ ವಿಂಗಡನೆಯಾಗಿ ಸರ್ವರಿಗೂ ಹಂಚಿಕೆಯಾಗುತ್ತಿತ್ತು ಹಾಗೆಯೇ ಕಾಯಕ ಮತ್ತು ದಾಸೋಹಕ್ಕೆ ಹೆಚ್ಚಿನ ಮಾನ್ಯತೆಯನ್ನು ಬಸವಾದಿ ಶರಣರು ನೀಡಿದ್ದರಿಂದ ಸಮಾಜದಲ್ಲಿನ ಸರ್ವರು ಒಂದೊಂದು ಕಾರ್ಯದಲ್ಲಿ ತೊಡಗಿದ್ದರು . ಇದರಿಂದ ಒಬ್ಬರ ಅವಶ್ಯಕತೆ ಮತ್ತೊಬ್ಬರಿಗೆ ಇರುವುದರಿಂದ ಸಮಾನತೆಯ ಜೊತೆಗೆ ಆರ್ಥಿಕ ಸ್ವತಂತ್ರ್ಯ ವು ಸಾಮಾನ್ಯ ಜನರಿಗೆ ಸಿಕ್ಕಿತು. ಸಮಾಜಕ್ಕೆ ಹೊರೆಯಾಗಿ ಬದುಕುವವರನ್ನು ವಚನಕಾರರು ಖಂಡಿಸುತ್ತಾರೆ. ಸ್ವಂತ ದುಡಿಮೆಯಿಲ್ಲದೆ. ಅನೈತಿಕವಾಗಿ ಅಕ್ರಮವಾಗಿ ಹಣಮಾಡಿ ಶ್ರೀ ಮಂತರಾಗವುದನ್ನು ಖಾರವಾಗಿ ಟೀಕಿಸುತ್ತಾರೆ ಜೊತೆಗೆ ನಿಷ್ಠೆಯಿಂದ ದುಡಿದು ದುಡಿಮೆಗೆ ಬಂದ ತಕ್ಕ ಪ್ರತಿಫಲವನ್ನು ಮಾತ್ರ ವ್ಯಕ್ತಿ ಉಪಭೋಗಕ್ಕೆ ಬಳಸಲು ಹಾಗು ಧಾರ್ಮಿಕ ಕಾರ್ಯಕ್ಕಾಗಿ ಬಳಸಲು ಯೋಗ್ಯನಾದವನು ಎಂದು ಹೇಳುವುದರ ಮೂಲಕ

ಸಮಾಜದಲ್ಲಿ ನಿಷ್ಠ ಕಾಯಕ ಪ್ರಜ್ಞೆಯನ್ನು ವೃತ್ತಿ ಗೌರವವನ್ನು ಕಾಯಕದ ಶ್ರೇಷ್ಠತೆಯನ್ನು ತೋರಿಸಿಕೊಡುತ್ತಾರೆ. ಇದಕ್ಕೆ ಚನ್ನಬಸವಣ್ಣನ ವಚನವನ್ನು ನಿದರ್ಶನವಾಗಿ ನೋಡಬಹುದು.

"ಸಹಾಯವಾಗಿ ರಾಜ್ಯತ್ವದ ಬಗ್ಗೆ ತಿರಸ್ಕಾರಭಾವನೆ ಯವರಾಗಿರಬೇಕು. ವಚನಕಾರರು ತಮ್ಮ ಆರಾಧ್ಯ ದೈವ ಶಿವನನ್ನೆ ಸಾರ್ವಚೌಡುನೆಂದರೆ ತಿಳಿಸಿದ್ದರಿಂದ ಜಾರನನ್ನು ದೈವಿಕ ಮೂಲದವನೆಂದು ಭಾವಿಸಲು . ಅವನು ತಮ್ಮಂತೆ ಸ್ವಾಬಾವಿತ ಭಕ್ತಿಯಾಗಿ ಕಾಣುತ್ತಿದ್ದರು .ಅಲ್ಲದೆ ವಚನಕಾರರು ಕೇವಲ ಧಾರ್ಮಿಕ ಹೋರಾಟವಷ್ಟೆ ಅಲ್ಲಿದೆ ಸಾಮಾಜಿಕ ಸಂಪ್ರದಾಯಿಕವಾಗಿ ಬೆಳೆದಿದ್ದ ಹಲವಾರು ಸಂಸ್ಥೆಗಳು ಮೇಲೆ ವಿರೂದದ ಭಾವನೆಯಿಂದ ಮೆರೆದವರಾಗಿದ್ದರು , ಇದರಿಂದ ಸಂಪ್ರದಾಯ ಶೀಲ ಕಚ್ಚಾ ಸದಾತನಿಗಳು ಕುತಂತಕ್ಕೆ ಮುಗಿದ ರಾಜೆಇಂದ ಇವರು ಕಿರುಕುಳವನ್ನು ಅನುಭವಿಸಿದರು , ಜೊತೆಗೆ ಹೋರಾಟಕ್ಕೆ ಇಳಿಯುವ ಹಂತಕ್ಕೆ ತಲುಪಿದರು .

ಅನೇಕ ದ್ವಂದವಗಳಿಂದ ಕೂಡಿದ ವಚನ ಚಳುವಳಿಯಲ್ಲಿ ವಚನಕಾರರ ರಾಜತ್ವದ ನಿಲುವುಗಳಲ್ಲಿ ಅನೇಕ ದ್ವಂದವಗಳಿಂದ ಕೂಡಿದೆ ಎಂಬುದಂತು ನಿಜ. ಇದಕ್ಕೆ ಬಸವಣ್ಣನವರು "ಅರಸುಮುನಿದೇಡೆ ಉರೋಗಿರಬಾರದು" ಎಂಬ ಬಸವಣ್ಣನವರ ಮಾತಿನಂತೆ ನೆಡೆದರು. ವಚನಕಾರರಲ್ಲಿ ಪ್ರಮುಖವಾದ ಈತನ ಇಂತಹಾ ರಾಜಕೀಯತ್ವಕ್ಕ ಯಲ್ಲಿ ನೋಡಿದವರು ಆಗಿದ್ದು ಅನುಬಾವದ ನುಡಿಯಾಗಿ ಹೊರ ಬಂದಿದೆಯಾದರು ಒಂದು ಬಗೆಯಲ್ಲಿ ರಂಜಲೈದ ವಿರೋಧ ಕಟ್ಟಿಕೊಳ್ಳದೆ , ಅದನ್ನೆ ಅನಯಸರಿಸಿ ರಾಜನಿಗೆ ತಲೆಬಾಗಿ ಮಾತನ್ನೆ ಪಾಲನೆಯನ್ನು ಜಾಡುತಪ್ಪುವುದರ ಜೊತೆಗೆ ಆವರು ಮುನಿಕೊಂಡರೆ ಹೇಗೆ ಎಂಬ ಭಯವು ಕಾಡಿರಬೇಕೆನಿಸುತ್ತಿದೆ. ಆದರೆ ಇದೇರಿತಿಯಲ್ಲಿ ಶಿವನನ್ನೆ ನಂಬಿಕೆಂಡು ನಿಷ್ಟೆಯನ್ನು ಆತನಿಗೆ ಆರ್ಪಿಸುವ ಒಂದು ಮನೋಭಾವ ಬಸವಣ್ಣ ಮತ್ತು ವಚನಕಾರರದು, ರಾಜನಿಗೆ ಜೋಳವಾಳಿ ತನವನ್ನು ಹಾಗೂ ಶಿವನಿಗೆ ಮೇಲಾಳಾಗಿ ಹಾಗೂ ನಿಷ್ಟೆಯನ್ನು ಪ್ರದರ್ಶಿಸಿದವರಾಗಿದ್ದಾರೆ. ಆದೇ ರೀತಿಯಲ್ಲಿ "ನೆಲೆನುಳ್ವನ ಹಣ್ಣೆಂದರೆ ಒಂದಡಿಕೆಗೆ ಕೊಂಬುವರಿಲ್ಲಾ ನೋಡಯ್ಯ" ಎಂದು ಹೇಳುವ ಮೂಲಕ ಅದಿಕಾರ ವಿರುವದರಿಂದ ರಾಜ ಮತ್ತು ರಾಜತ್ವಕ್ಕೆ ಮನ್ನಣೆಯೆ ವೇಳೆವಾಳಿ ಎಂದು ಹೇಳುತ್ತಾರೆ "ರಾಜ್ಯ ಹೋದಲ್ಲಿ ರಾಯತನ ವುಂಡಿ" ಇಂತಹ ವಾಸ್ತು ಪ್ರಜ್ಞೆ ಮತತು ರಂಜ ಹಾಗೂ ರಾಜತ್ವದ ವಿರುದ್ದ ತಿರಸ್ಕಾರದ ಭಾವನೆಗಳು ಬಸವಾದಿ ಶರಣರಲ್ಲಿ ತುಂದಿತ್ತು.

"ನೆಲನಾಳ್ದನ ಹೆಣನೆಂದರೆ ಒಂದಡಿಕೆಗೆ ಕೊಂಬುವರಿಲ್ಲ" ಎಂದು ಹೇಳುವ ಮೂಲಕ ಒಟ್ಟಾರೆಯಾಗಿ ಹೇಳಬೇಕೆಂದರೆ ವಚನ ಚಳುವಳಿಯು ಜನಪರಕಾಳಜಿಯುಳ್ಳ ಸಾಮಾಜಿಕ ಬದಲಾವಣೆಯ ಮಹಾ 'ಮಣಿಹ' ವೆಂದು ಹೊತ್ತುತಂದಂತಹದ್ದಾಗಿದ್ದು. ಅಲವು ಆಯಾಮಗಳನ್ನು ಹೊಂದಿದ್ದಾಗಿದೆ. ಬಸವಣ್ಣನವರ ನೇತೃತ್ವದಲ್ಲಿ ನಡೆದ ಈ ಮಹಾ ಹೋರಾಟದಲ್ಲಿ ಶರಣ ಸಂಕುಲವೇ ಭಾಗವಹಿಸಿ. ಸಾಮಾಜಿಕ , ಧಾರ್ಮಿಕ, ರಾಜಕೀಯ ಆರ್ಥಿಕವಾಗಿ ಹಾಗೂ ವೈಯಕ್ತಿಕವಾಗಿ, ಬದಲಾವಣೆಗೆ ಪ್ರೇರಕ ಶಕ್ತಿಯಾಗಿ ಹೊಮ್ಮಿದೆ ಎಂದೇ ಹೇಳ ಬೇಕಾಗುತ್ತದೆ.

**ಕೊನೆ ಟಿಪ್ಪಣಿ**

೦೧. ಎಂ. ಚಿದಾನಂದಮೂರ್ತಿ ಅವರ ವಚನಸಾಹಿತ್ಯ. ಪು.ಸಂ. ೩೦–೩೨

೦೨. ಪಿ.ವಿ.ನಾರಾಯಣ ಅವರ ವಚನ ಸಮಗ್ರ ಕೃತಿಯಿಂದ ಮಾಹಿತಿ ಪಡೆಯಲಾಗಿದೆ

೦೩. ಎಂ.ಜಿ. ಚಂದ್ರಶೇಖರಯ್ಯ ಬಸವಣ್ಣ–ಜೀವನ, ಸಾಧನೆ ಕೃತಿಯಿಂದ ಮಾಹಿತಿ ಪಡೆಯಲಾಗಿದೆ.

೦೪. ಬಿ.ವಿ. ಮಲ್ಲಾಪುರ, ಅಲ್ಲಮಪ್ರಭುದೇವರ ವಚನ ಸಂಪುಟ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೩

೦೫. ಆರ್.ಸಿ. ಹಿರೇಮಠ, ಚನ್ನಬಸವಣ್ಣನವರ ವಚನ ಸಂಪುಟ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೩

# ಅಧ್ಯಾಯ ೩

## ವಚನ ಸಾಹಿತ್ಯ ಚಳುವಳಿ: ವ್ಯಕ್ತಿ ವಿಶಿಷ್ಟತೆ

೧೨ನೇ ಶತಮಾನದಲ್ಲಿ ಕರ್ನಾಟಕದಲ್ಲಿ ನಡೆದ ಸಮಾಜೋ-ಧಾರ್ಮಿಕ ಕ್ರಾಂತಿಯೂ ಮಹತ್ವ ಪೂರ್ಣವಾದದ್ದು. ಏಕೆಂದರೆ ವಿವಿಧ ದೃಷ್ಟಿಕೋನದಿಂದ ಅಧ್ಯಯನ ಮಾಡುವುದಕ್ಕೆ ಅರ್ಥೈಸಿಕೊಳ್ಳುವುದಕ್ಕೆ ಸಾಧ್ಯವಾಗುವಂತಹದ್ದು ಎಂದು ಹೇಳಬಹುದಾಗಿದೆ. ಅಲ್ಲದೆ ಇಂದಿನ ಆಧುನಿಕ ಸಮಾಜದಲ್ಲಿನ ಅನೇಕ ಸಮಸ್ಯೆಗಳಿಗೆ ಪರಿಹಾರವನ್ನು ನೀಡಿ ಸಮಾಜದ ಉನ್ನತಿಗೆ ಬೇಕಾಗುವಂತಹ ಅವಶ್ಯ ಮಾರ್ಗಗಳ ದರ್ಶನವನ್ನು ಮಾಡಿಕೊಡುತ್ತದೆ ಎಂದರೆ ತಪ್ಪಾಗುವುದಿಲ್ಲ. ಸಮಾಜದ ನಾನಾ ರಂಗದ ವಿವಿಧ ಸ್ಥರಗಳಿಂದ ಪ್ರತಿನಿಧೀಗಳಂತೆ ಶರಣರು, ಭಕ್ತರು ಬಹು ಸಂಖ್ಯೆಯಲ್ಲಿ ಬಂದು ಒಟ್ಟುಗೂಡಿದರು. ಅನೇಕ ಸಮಾಜೋ ಧಾರ್ಮಿಕ ಚಿಂತನೆಗಳನ್ನು, ಚರ್ಚೆಗಳನ್ನು ಮಾಡತೊಡಗಿದರು. ಇದರ ಫಲವಾಗಿ ಒಂದು ಆದರ್ಶವಿತವಾದ ಸಮಾಜದ ನಿರ್ಮಾಣದ ಕನಸನ್ನು ಹೊತ್ತುಕೊಂಡು ಅದನ್ನು ನಿರ್ಮಾಣ ಮಾಡುವಲ್ಲಿ ಅವಿರತ ಶ್ರಮಜೀವಿಗಳಾಗಿ ಶ್ರಮಿಸಿದರು. ಇದರ ಫಲವಾಗಿ ಧಾರ್ಮಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಅನೇಕ ಬಗೆಯಲ್ಲಿ ಉನ್ನತಿಯನ್ನು ಸಾಧಿಸಲಾಯಿತು. ವಿಭಿನ್ನ ಹಾಗೂ ವೈಚಾರಿಕವಾದ ಆಲೋಚನೆಗಳನ್ನು ಮಾಡುವುದರ ಮೂಲಕ ಒಂದು ಹೊಸ ಸಿದ್ಧಾಂತವನ್ನು ರೂಪಿಸಿಕೊಟ್ಟರು. ತಮ್ಮ ತಮ್ಮ ಅನುಭವಗಳನ್ನು ಅನುಭಾವವಾಗಿಸಿಕೊಂಡು ಅವುಗಳನ್ನು ವಚನ ರೂಪದ ಸಾಹಿತ್ಯ ಪ್ರಕಾರದ ಮೂಲಕ ಹೊರ ಹಾಕುತ್ತ ಅಭಿವ್ಯಕ್ತಪಡಿಸುತ್ತಿದ್ದರು. ಕೇವಲ ಶರಣರು ಹೇಳುವುದನ್ನು ಮುಖ್ಯವಾಗಿರಿಸಿಕೊಳ್ಳದೇ, ನುಡಿದಂತೆ ನಡೆಯುವುದು ನಡೆದಂತೆ ನುಡಿಯುವುದನ್ನು ರೂಪಿಸಿಕೊಂಡವರಾಗಿದ್ದರು. ಶರಣರಲ್ಲಿ ಅನೇಕರು ಇದ್ದರು. ಅವರದು ಒಂದೊಂದು ಆಸೆಯಕ್ಕೆ ಕಟ್ಟು ಬಿದ್ದ ಸಿದ್ಧಾಂತವೆಂಬಂತೆ ಕಂಡರು ಅವರಲ್ಲಿ ಅನೇಕ ವೈರುಧ್ಯಗಳಿಂದ ಕೂಡಿದ ಚಿಂತನೆ ಆಲೋಚನಾ ಕ್ರಮಗಳಿದ್ದವು. ಅಂದರೆ ಅಲ್ಲಿಯ ತನಕ ನಡೆದುಕೊಂಡು ಬಂದಿದ್ದ, ಯಾರೋ ಒಬ್ಬ ಹೇಳಿದ್ದನ್ನೇ, ಉಪದೇಶಿಸಿದ್ದನ್ನೇ ಮೂಕ ಪ್ರೇಕ್ಷರಂತೆ ಕೇಳುತ್ತ, ನೋಡುತ್ತ

ಇರಲು ಒಪ್ಪದೆ ಅವರದೇ ಆದ ಸ್ವಂತ ಅನುಭಾವದಿಂದ ಕಂಡುಂಡ ಸತ್ಯವನ್ನು ಸಾದರ ಪಡಿಸುವ ಪ್ರವೃತ್ತಿಯನ್ನು ಶರಣರು ಚಳುವಳಿಯ ಮೂಲಕ ಬೆಳೆಸಿದರು ದೇಶದ ನಾನಾ ಭಾಗಗಳಿಂದ ಬಂದಿದ್ದ ಶರಣರ ಸಮೂಹವು ಇಂತಹ ವೈಚಾರಿಕ ನೆಲೆಯಲ್ಲಿ ಸಮಾಜವನ್ನು ನೋಡುವುದರ ಜೊತೆಗೆ ಒಂದು ಸಮಾಜಕ್ಕೆ ಆದರ್ಶಯುತವಾದ ಬೆಳವಣಿಗೆಯನ್ನು ನೀಡಿ ಆ ಸಮಾಜವು ಉನ್ನತಿಯತ್ತ ಸಾಗುವುದಕ್ಕೆ ೧೨ನೇ ಶತಮಾನದಲ್ಲಿ ಒಂದು ಬೇದಿಕೆಯನ್ನು ನಿರ್ಮಾಣ ಮಾಡಿದರು. ತಮ್ಮ ನುಡಿ ಹಾಗೂ ನಡೆಗೂ ಅಂತರವಿಲ್ಲದೆ ವೈರುಧ್ಯವಿರದ ಹಾಗೆ ಬದುಕಿದರು. ಇವರಲ್ಲಿ ಕೆಲವರು ಸುಪ್ರಸಿದ್ಧರು ಇನ್ನೂ ಕೆಲವರು ಪ್ರಸಿದ್ಧಿಗೆ ಬಾರದವರು ಇದ್ದಾರೆ. ಇಂಥ ಸುಪ್ರಸಿದ್ಧ ವಚನಕಾರರು, ಅನುಭವಿಗಳು ಆಗಿರುವವರಲ್ಲಿ ಬಸವಣ್ಣನವರು, ಅಲ್ಲಮಪ್ರಭು, ಅಂಬಿಗರ ಚೌಡಯ್ಯ, ನೀಲಾಂಭಿಕೆ, ಅಕ್ಕಮಹಾದೇವಿ, ಸಿದ್ಧರಾಮ ಮುಂತಾದವರು ಇದ್ದಾರೆ.

## ಸಿದ್ಧರಾಮ

ಹನ್ನೆರಡನೇ ಶತಮಾನದಲ್ಲಿ ಶಿವಶರಣರ ಸಾಮಾಜಿಕ ಹೋರಾಟದಲ್ಲಿ ಸೊನ್ನಾಲಿಗೆ ಸಿದ್ಧರಾಮರದು ಪ್ರಮುಖವಾದ ಪಾತ್ರ, ವಚನಾಕಾರರು, ಅನುಭಾವಿಗಳು, ಕಾಯಕಯೋಗಿಯು ಕೂಡಾ ಆಗಿದ್ದಾರೆ. ಇವರು ತಮ್ಮದೇ ಆದ ರೀತಿಯಲ್ಲಿ ವಿಶಿಷ್ಟತೆಯನ್ನು, ವ್ಯಕ್ತಿ ವೈಶಿಷ್ಟತೆಯನ್ನು ಪಡೆದಿರುವ ವ್ಯಕ್ತಿಯಾಗಿದ್ದಾರೆ. ಇವರಲ್ಲಿ ಅನೇಕ ವೈರುಧ್ಯವಿರುವಂತೆ ತಮ್ಮ ವಚನಗಳಲ್ಲಿ ವೈಚಾರಿಕತೆಯನ್ನು, ಆಧ್ಯಾತ್ಮಿಕತೆಯನ್ನು, ಸಾಮಾಜಿಕತೆಯನ್ನು ಬಿಂಬಿಸುವಲ್ಲಿ ವಿಶಿಷ್ಟ ಅನುಭಾವದೊಂದಿಗೆ ಇದ್ದವರಾಗಿದ್ದಾರೆ. ಹನ್ನೆರಡನೇ ಶತಮಾನದ ವಚನ ಚಳುವಳಿಗಿಂತ ಸುಮಾರು ಏಂಟುನೂರು ವರ್ಷಗಳಷ್ಟು ಮುಂದೆ ಪಯಣಿಸಿದಂತೆ ಆತನ ಚಿಂತನೆಗಳು ಹಾಗೂ ಲೋಕೋಪಯೋಗಿ ಕಾರ್ಯಗಳು ಇವೆ ಎಂದರೆ ಉತ್ಪ್ರೇಕ್ಷೆಯಲ್ಲ.

ಹನ್ನೆರಡನೇ ಶತಮಾನದ ವಚನ ಚಳುವಳಿಯು ಸಮಾಜದಲ್ಲಿನ ತಾರತಮ್ಯವನ್ನು ದೂರಿಕರೀಸಿ, ಲಿಂಗ ಭೇದವನ್ನು ನಿರಾಕರಿಸಿ ವೃತ್ತಿಯ ಬಗ್ಗೆ ಇದ್ದ ಕೀಳರಿಮೆಯನ್ನು ಹೊಡೆದೊಡಿಸಿ ಸತ್ಯ ಶುದ್ಧವಾದ ನಿಷ್ಠೆಯುತವಾದ ಎಲ್ಲಾ ಕೆಲಸವನ್ನು ಕೈಲಾಸಕ್ಕೆ ಸಮಾನಾಗಿಸಿ ಕಾಯಕವೆಂಬ ವಿಶಿಷ್ಟ ಬಗೆಯ ಮಹತ್ವಪೂರ್ಣವಾದ ಅರ್ಥ ನೀಡಿ ಗೌರವಿಸುವ ಇಹಪರಗಳೊಳಗಿರುವ ಕ್ರಿಯಾತ್ಮಕ ಸಂಬಂಧವನ್ನು ಗುರುತಿಸುವ ಇಂತಹ ಕೆಲವು ಅಂಶಗಳಲ್ಲಿ ಶರಣರಗೆ, ವಚನಕಾರರಿಗೆ ಸಮಾನವಾದ ರೀತಿಯ ಅಭಿಪ್ರಾಯಗಳಿರುವುದನ್ನು ನಾವು ಕಾಣಬಹುದಾಗಿದೆ. ಆದರೆ ಮುಖ್ಯವಾಗಿ ನಾವು ಒಬ್ಬಬ್ಬ ಶರಣನು ಒಂದೊಂದು ಅಂಶದಲ್ಲಿ ಒಂದೊಂದು ಕ್ಷೇತ್ರದಲ್ಲಿ ಇದ್ದು ಆಸಕ್ತನಾಗಿದ್ದುದನ್ನು ಕಾಣಬಹುದಾಗಿದೆ. ಆದ್ದರಿಂದಲೇ ಬಸವಣ್ಣನನ್ನು ಭಕ್ತನೆಂದು ಚೆನ್ನಬಸವಣ್ಣನನ್ನು ಮಹಾಜ್ಞಾನಿಯೆಂದು ಕರೆದರೆ ಅಲ್ಲಮಪ್ರಭುವನ್ನು ಮತ್ತು ಅಕ್ಕಮಹಾದೇವಿಯನ್ನು ವೈರಾಗ್ಯದ ಮಹಾತೇಜೋಮೂರ್ತಿ ಎಂದು ಕರೆದರು. ಅದರೆ ಕಾಯಕಕ್ಕೆ ಮಡಿವಾಳ ಮಾಚಯ್ಯಾನನ್ನು ಕರ್ಮಯೋಗಕ್ಕೆ ಸಿದ್ಧರಾಮನನ್ನು ಪ್ರಸಿದ್ಧರೆಂದು ಕರೆದರು. ಇದರಿಂದ ನಾವು ಒಬ್ಬೊಬ್ಬ ಶರಣರು ಮಾರ್ಗದ ಹಿನ್ನೆಲೆಯಲ್ಲಿ ಅವರನ್ನು ಗುರುತಿಸಲಾಗುತ್ತಿತ್ತು ಎಂದೇ ಪರಿಬಭಾವಿಸಬಹುದಾಗಿದೆ.

ಶರಣರು ಸಾಮಾನ್ಯ ದೃಷ್ಟಿಯನ್ನು ಹೊಂದಿದ್ದಂತೆ ಒಂದು ವಿಶಿಷ್ಟವಾದ, ವಿಭಿನ್ನವಾದ, ಮಹತ್ತರವಾದ ವೈಚಾರಿಕತೆಯ ದೃಷ್ಟಿಯನ್ನು ಹೊಂದಿದ್ದರೆಂಬುದು ತಿಳಿಯುತ್ತದೆ. ಅಂದರೆ ಪ್ರತಿಯೊಬ್ಬ ಶರಣ ವಿಶಿಷ್ಟ ವ್ಯಕ್ತಿಯಾಗಿದ್ದಾನೆ. ಅನೇಕ ವಿಚಾರಗಳಲ್ಲಿ ಒಬ್ಬರು ಮತ್ತೊಬ್ಬರನ್ನು ಹೋಲಿಸಬಹುದು. ಒಬ್ಬರ ಆಶಯದಂತೆ ಇನ್ನೊಬ್ಬರ ಚಿಂತನೆ, ದೃಷ್ಟಿಕೋನ ಇರಬಹುದು. ಆದರೆ ಒಬ್ಬರಂತೆ ಮತ್ತೊಬ್ಬರಿಲ್ಲ ಎಂದೆ ಹೇಳಬೇಕಾಗುತ್ತದೆ. ಏಕೆಂದರೆ ಬಸವಣ್ಣನನ್ನು ಮಹಾಭಕ್ತನೆಂದು ಕರೆಯಬಹುದು. ಆದರೆ ಇತರ ಶರಣರನ್ನು ಭಕ್ತರೆಂದು ಕರೆಯಲು ಸಾಧ್ಯವಿಲ್ಲ ಎಂದೇಳಲುಬಾರದು. ಬಸವಣ್ಣನ ನಿದ್ದೆಯನ್ನು ಆತನ ಸಾವೆಂಬ ಪೂರ್ವ ಮಾರ್ಗವನ್ನು ಏಕತೆಯನ್ನು ಗಮನಿಸಿ ಹೇಳಬಹುದು. ಇಂತಹ ನಿರ್ಣಯಗಳನ್ನು ತೆಗೆದುಕೊಳ್ಳುವಾಗ ಬಹು ಎಚ್ಚರಿಕೆಯೂ ಕೂಡಾ ಬೇಕಾಗುತ್ತದೆ. ಎಂದೇ ನನ್ನ ಭಾವನೆಯಾಗಿದೆ. ಒಬ್ಬ ಶರಣನು ಒಂದು ಸಾಧ್ಯತೆಯ ಬಗ್ಗೆ ಚರ್ಚಿಸಿದಾಗ ಅದಕ್ಕಿಂತ ಭಿನ್ನವಾಗಿ, ಅದಕ್ಕಿಂತ ಮಹತ್ತರವಾಗಿ, ಉದಾತ್ತವಾಗಿ ಇನ್ನೊಬ್ಬ ಶರಣನ ಚಿಂತನೆ ಕಂಡು ಬರುತ್ತದೆ. ಆದ್ದರಿಂದ ಒಬ್ಬೊಬ್ಬ ಶರಣರು ಭಿನ್ನ ಹಾಗೂ ವಿಶಿಷ್ಟ ವ್ಯಕ್ತಿತ್ವ ಹೊಂದಿದವರಾಗಿದ್ದಾರೆ.

ಸಿದ್ಧರಾಮ ಕರೆ–ಗುಡಿಗಳನ್ನು ಕಟ್ಟಿಸುವ ಸಾಮೂಹಿಕ ವಿವಾಹದಂತಹ ಕಾರ್ಯಗಳನ್ನು ಮಾಡುತ್ತಾ ಜನಹಿತ ಕಾರ್ಯಗಳಲ್ಲಿ ತೊಡಗಿ ಕರ್ಮಯೋಗಿ ಎಂದು ಹೆಸರು ಪಡೆದು ತನ್ನ ವೈಶಿಷ್ಟವನ್ನು ಮೆರೆದರು. ಕೇವಲ ಈ ರೀತಿ ಲೋಕೋಪಯೋಗಿ ಕಾಯಕಕ್ಕಷ್ಟೇ ಸೀಮಿತಗೊಳ್ಳದೇ ಇದನ್ನು ಮೀರಿ ಬೆಳೆದವರು ಸಿದ್ಧರಾಮರು. ಸಿದ್ದಾರಾಮರು ಕ್ರಿಯಾಲೋಕದಿಂದ ಚಿಂತನೆಯ ಲೋಕಕ್ಕೆ ಸರಳವಾಗಿ ಬರುವುದರ ಜೊತೆಗೆ ಈ ಎರಡು ಸ್ಥಳಗಳಲ್ಲಿ ಸಮಾನವಾದ ಸಂಬಂಧವನ್ನು ಹೊಂದಿದ್ದರು ಎಂಬುದನನು ನಾವು ಸಿದ್ಧರಾಮರನ್ನು ಅಭ್ಯಾಸಿಸಿದಾಗ ತಿಳಿಯುತ್ತದೆ. ಸಿದ್ಧರಾಮರದು ಸಿದ್ಧಾಂತ ಮತ್ತು ಕ್ರಿಯೆಗಳೆರಡರ ನಡುವೆ ಅಂತರವನ್ನು ಇರಗೊಡದಂತಹ ವ್ಯಕ್ತಿತ್ವ ಸಿದ್ಧರಾಮರದು. ಇದು ಅವರ ವ್ಯಕ್ತಿ ವಿಶಿಷ್ಟತೆಯೂ ಕೂಡ ಆಗಿದೆ.

## ಸಿದ್ಧರಾಮರ ಸಾಹಿತ್ಯ

ಸಿದ್ಧರಾಮರ ಜನೋಪಯೋಗಿ ಕಾರ್ಯಗಳು ಜನರ ನಿಷ್ಠಾಪೂರ್ವ, ಭಕ್ತಿಯನ್ನು ಕಳಿಸಿತು. ಸಿದ್ಧರಾಮ ಸೊನ್ನಾಲಿಗೆಯು ಶರಣರ ಸ್ಥಾನವಾಗಿತ್ತು. ಕಲ್ಯಾಣ ಕ್ರಾಂತಿಯ ನಂತರ ರಾಜರು ಈತನ ನೆರವನ್ನು ಕೇಳಿದರು. ಶೂನ್ಯ ಸಿಂಹಾಸನದ ಪರಂಪರೆಯು ಅಲ್ಲಮನ ನಂತರ ಈತನೇ ಮುಂದುವರಿಸಿದನು. ಈ ಎಲ್ಲಾ ಕಾರಣದಿಂದಾಗಿ ಅವನ ಸಾಹಿತ್ಯಕ್ಕೆ ಪೆಟ್ಟು ಬೀಳಲಿಲ್ಲ. ಸ್ವತಃ ಸಿದ್ಧರಾಮರು ಹೇಳಿದಂತೆ "ಅರವತ್ತೆಂಟು ಸಾವಿರ ವಚನಗಳನ್ನು ಹಾಡಿ ಹಾಡಿ ಸೊತಿದೆ ನನ್ನ ಮನ ನೋಡಯ್ಯ" ಎಂದು ಹೇಳಿದ್ದಾರೆ. ಆದರೆ ಈವರೆಗೂ ನಮಗೆ ೧೪೦೦ಕ್ಕೂ ಹೆಚ್ಚು ವಚನಗಳು ದೊರೆತಿವೆ. ತಿಪ್ಪೇರುದ್ರಸ್ವಾಮಿಯವರ ಪ್ರಕಾರ ಆತನ ಹೇಳಿಕೆಯು "ನಿಖರವಾದ ಸಂಖ್ಯೆ ಎಂದು ಪರಿಗಣಿಸದಿದ್ದರೂ ಬಹು ಸಮೃದ್ಧವಾಗಿ ವಚನಗಳನ್ನು ರಚಿಸಿರುವುದರ ಸೂಚನೆಯಾಗಿದೆ. ಆದರೆ ಈಗ ದೊರೆತಿರುವ ಇಷ್ಟು ವಚನಗಳು ಸಾಕು ಈತನನ್ನು ಆ ಯುಗದ ಶ್ರೇಷ್ಠ ವಚನಕಾರರಲ್ಲಿ ಒಬ್ಬನೆಂದು

ಪರಿಗಣಿಸುವುದಕ್ಕೆ"[7] ವಚನಗಳಲ್ಲದೆ ಈತ ಬಸವ ಸ್ತೋತ್ರ, ತ್ರಿಪದಿ, ಅಷ್ಟಾವರ್ಣಸೂತ್ರ ತ್ರಿಪದಿ, ಸಂದೇಶ ತ್ರಿಪದಿಗಳನ್ನು ರಚಿಸಿದ್ದಾರೆ.

"ವಚನ ರಚನೆ ಬಗ್ಗೆ ಸಾಕಷ್ಟು ಚಿಂತಿಸಿದ್ದಾರೆ"[8] ಎಂದು ಅ.ರಾ. ಮಿತ್ರ ಹೇಳುತ್ತಾ ಮುಂದುವರಿದು ಸಿದ್ಧರಾಮರ ಮಾತನ್ನು ಉದ್ಧರಿಸುತ್ತಾ ಹೀಗೆ ಅಭಿಪ್ರಾಯ ಪಡುತ್ತಾರೆ. "ವಚನ ಎಂಬುದು ಕರ್ಣಾಟವಯ್ಯ" ಎಂಬ ಮಾತಿನಲ್ಲಿ ಕನ್ನಡದಲ್ಲಿ ವಚನ ಸಾಹಿತ್ಯ ವಿಶಿಷ್ಟವಾಗಿ ರೂಪು ತಳೆದಿರುವುದನ್ನು ಸಿದ್ಧರಾಮ ಗುರುತಿಸಿದ್ದಾರೆಂಬ ಅಂಶ ಸ್ಪಷ್ಟವಾಗಿದೆ.

ಸಿದ್ಧರಾಮ ತನ್ನ ವಚನಗಳ ರಚನೆಯಲ್ಲಿ ಅನುಭವವನ್ನು ಸಮಾಜದಲ್ಲಿರುವ ಆಚಾರ–ವಿಚಾರಗಳನ್ನು, ತನ್ನ ಅನುಭಾವಗಳನ್ನು ಯಾವ ಹಂಗು ಇಲ್ಲದೆ ನೇರವಾಗಿ ಹೇಳುವುದರ ಜೊತೆಗೆ ಉಪಮಾನ, ಉಪಮೇಯಗಳಿಂದ, ಸಂಕೇತ ಪ್ರತಿಮೆಗಳಿಂದ ತನ್ನ ರಚನೆಗಳಲ್ಲಿ ಮನಮುಟ್ಟುವಂತೆ ಅಭಿವ್ಯಕ್ತಿಗೊಳಿಸಿದ್ದಾರೆ. ಸಾಹಿತ್ಯವು ಕೇವಲ ಸಾಹಿತ್ಯವಾಗಿರದೆ ಮನಶುದ್ಧಿ ಮತ್ತು ಜ್ಞಾನಶುದ್ಧಿಯ ಪ್ರತೀಕವಾಗಿರಬೇಕೆಂಬ ಅಭಿಪ್ರಾಯವು ಆತನದಾಗಿದೆ. ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು, ಚೆನ್ನಬಸವಣ್ಣನಂತೆ ಹಾಗೂ ದೇವರದಾಸಿ ಮುಖ್ಯನಂತೆ ಆಲೋಚಿಸಿದರು ಸತಿ–ಪತಿ ಭಾವದಲ್ಲಿ ತನ್ನದೇ ಆದ ನಿಲುವನ್ನು ಸಿದ್ಧರಾಮ ಮೆರೆಯುತ್ತಾರೆ. ಅಲ್ಲದೆ ಇದು ಕಾವ್ಯ ಮಾಧುರ್ಯದಿಂದ ಶೋಭಿಸುವುದು ನಿಜ.

ನೆನಹಿನ ನಲ್ಲನು ಮನೆಗೆ ಬಂದಡೆ ಮನದಲ್ಲಿ ನುಡುಕಟ್ಟುವೆನವ್ವಾ
ತೋರಣ ತೋರಣ ಮಾಮರ ಮಾಮರ ತೋರಣಗಟ್ಟುವೆನವ್ವಾ
ಕಾಮಸಂಗವದು ನಿಷ್ಕಾಮ ಸಂಗಕ್ಕಳಸುವೆನವ್ವಾ
ಕಪಿಲಸಿದ್ಧ ಮಲ್ಲಿಕಾರ್ಜುನನ ಕೂಡವೆನವ್ವಾ

ಈ ವಚನದಲ್ಲಿ ಸಿದ್ಧರಾಮರು ಶರಣಸತಿ–ಲಿಂಗಪತಿ ತತ್ವವನ್ನು ಇತರ ವಚನಕಾರರಂತೆ ಹೇಳಿದರು. ಅವರಿಗಿಂತ ಒಂದು ಭಿನ್ನವಾಗಿ ವಿವರಿಸುವ ಪ್ರಯತ್ನವಾಗಿದೆ. ಏಕೆಂದರೆ ಕರ್ಮಯೋಗಿಯಾಗಿ ಸನ್ಯಾಸತ್ವದಲ್ಲಿದ್ದರು. ಸಂಸಾರಿಗಳಾದ ವಚನಕಾರರಂತೆ ಇಂತಹ ಪ್ರತಿಮೆಗಳನ್ನು ಬಳಸಿ ಹೇಳುವುದು ಸಿದ್ಧರಾಮರ ವೈಶಿಷ್ಟವಾಗಿದೆ.

ವಚನ ಚಳುವಳಿಯು ಸಮಾಜದ ಎಲ್ಲಾ ವರ್ಗದ ಜನರ ಏಳಿಗೆಯನ್ನು ಬಯಸುವ ಆಶಯವನ್ನು ಹೊಂದಿರುವಂತಹ ಸಾಮಾಜಿಕ ಆಂದೋಲನವಾಗಿದೆ. ಶರಣರು ಅಥವಾ ವಚನಕಾರರು ತಮ್ಮ ಹಿತವನ್ನು ಬಯಸದೆ ಸಮಾಜದ ಎಲ್ಲಾ ವರ್ಗದ, ಸಮಾಜದ, ಎಲ್ಲ ಸ್ತರದ ಜಾತಿಯ ಜನರಲ್ಲಿ ಸಮಾನತೆಯನ್ನು ಸಾಧಿಸು ನಿಟ್ಟಿನಲ್ಲಿ ಕಲ್ಯಾಣಕರವಾದ ನೀತಿನಿಯಮಗಳು ರೂಪಿಸುವಂತೆ ಅವರು ವಚನಗಳನ್ನು ರಚಿಸಿದರು ಜೊತೆಗೆ ಪರಾಂಪರಗತವಾಗಿ ನಂಬಿಕೊಂಡು ಬಂದಿದ್ದ ಅಂದ ಶ್ರದ್ಧೆಯನ್ನು ನಿರಾಕರಿಸಿ ಒಂದು

ಹೊಸ ಸಮಾಜ ನಿರ್ಮಿಸಿ ಸರ್ವರ ಹಿತವನ್ನೆ ಬಯಸಿ ಅವರ ಹಿತವನ್ನೆ ಸಾಧಿಸಬೇಕೆಂಬ ಆಶಯವು ಶರಣರದು ಅಂತೆಯೇ ಸಿದ್ಧರಾಮರು ಕೂಡ ಶರಣರಿಗಿಂತ ಒಂದು ಹೆಜ್ಜೆಯಷ್ಟೆಯಲ್ಲಾ ಬಹುದೂರ ಸಾಗಿ ಜನತೆಯ ಕಲ್ಯಾಣಕ್ಕಾಗಿ ಇಂದಿನ ಆಧುನಿಕ ಕಾಲದಲ್ಲಿ ಕಷ್ಟವೆನಿಸುವಂತಹ ಕಾರ್ಯಗಳನ್ನು ಮಾಡಿ ತನ್ನ ತನವನ್ನು ಮೆರೆದು ಒಂದು ಹೊಸ ಮಾರ್ಗದರ್ಶಕರಾಗಿದ್ದಾರೆ. ಸಾಮೂಹಿಕ ವಿವಾಹಗಳನ್ನು ಮಾಡಿಸುವುದು. ಕೆರೆ-ಬಾವಿಗಳನ್ನು ನಿರ್ಮಾಣ ಮಾಡುವುದು. ಗುಡಿ-ಗೋಪುರುಗಳನ್ನು ಕಟ್ಟಿಸುವುದು. ಸಮಾಜದ ಕೆಳಸ್ತರದ ಜನಾಂಗದಲ್ಲಿ ಅಂದಿನ ವಿಷಮ ಪರಿಸ್ಥಿತಿಯಲ್ಲಿ ಜನಿಸಿದರೂ ಅವನ್ನು ಮೀರಿ ಅಂದಿನ ಮೇಲಸ್ತರ ವರ್ಗದ ಜನರ ವಿರೋಧ ಲೆಕ್ಕಿಸದೇ ಇಂತಹ ಕಾರ್ಯಕ್ಕೆ ಕೈಹಾಕಿ ಪ್ರಾಯಶಃ ಯಶಸ್ವಿಯಾದವರು ಸಿದ್ಧರಾಮರು.

ಅನ್ಯರ ಹಿತವನ್ನೇ ಬಯಸಿ ಅವರ ಕಲ್ಯಾಣವನ್ನು ಸಾಧಿಸುವ ಕ್ರಿಯೆ ಸಮಾಜಕಾರ್ಯ ಎಂದು ಪರಿಗಣಿಸಲಾಗುತ್ತದೆ. ಇದನ್ನು ಸಿದ್ಧರಾರು ಕೂಡ ಸ್ಪಷ್ಟವಾಗಿಯೇ ಹೇಳುತ್ತಾರೆ.

ಮಾಡಿದರು ಮಾಡಿದರು ತಮ್ಮ ಹಿತಕ್ಕಲ್ಲದೆ

ಮತ್ತಾರ ಹಿತಕ್ಕಲ್ಲ ನೋಡಯ್ಯ

ನೋಡಿದರು ನೋಡಿದರು ತಮ್ಮ ಹಿತಕ್ಕಲ್ಲದೆ

ಮತ್ತಾರ ಹಿತಕ್ಕಲ್ಲ ನೋಡಯ್ಯ

ತನ್ನ ಬಿಟ್ಟು ಹಿತವ ನೋಡಿದಡೆ

ಕೂಡಿಕೊಂಬ ನಮ್ಮ ಕಪಿಲ ಮಲ್ಲಯ್ಯನವರು

ಒಬ್ಬ ಸಮಾಜದ ಕಾರ್ಯದಲ್ಲಿ ತೊಡಗಿದವನು ಕೇವಲ ತನ್ನ ಹಿತವನ್ನೆ ಸಾಧಿಸಿಕೊಂಡು ಏನೋ ಒಂದು ಮಹತ್ತರವಾದ ಸಾಧನೆಯನ್ನು ಮಾಡಿದ್ದೇನೆ ಎಂದು ಬೀಗುವುದನ್ನು ಈ ವಚನದಲ್ಲಿ ಖಂಡಿಸಲಾಗುತ್ತದೆ ಎಂದರೆ ಉತ್ಪ್ರೇಕ್ಷೆಯಲ್ಲ. ಏಕೆಂದರೆ ಒಬ್ಬ ಸಮಾಜ ಸೇವಕನು ಅಥವಾ ಕಾರ್ಯಕರ್ತನು ಇಡೀ ಸಮಾಜದ ಹಿತಕ್ಕಾಗಿ ಶ್ರಮಿಸಬೇಕು ಎಂಬ ಧ್ವನಿಯನ್ನು ಸಿದ್ಧರಾಮರಲ್ಲಿ ಕಾಣಬಹುದಾಗಿದೆ. ಅಲ್ಲದೆ ಇದು ನಿಜವಾದರೂ ಕೇವಲ ಇದು ಮಾತ್ರ ಸಮಾಜಕಾರ್ಯವಲ್ಲ. ಅನ್ಯರ ಹಿತ ಮತ್ತು ಒಳ್ಳೆಯದನ್ನು ಬಯಸುವವನು. ಸಮಾಜದ ಸಾಮಾನ್ಯ ಜನರ ಸಮಸ್ಯೆಗಳನ್ನು ಮತ್ತು ಒಳ್ಳೆಯದನ್ನು ಬಯಸುವ ಸಮಾಜ ಸೇವಕನ ಸಮಸ್ಯೆಗಳ ಪರಿಹಾರದಲ್ಲಿ ತೊಡಗಬೇಕಾಗುತ್ತದೆ. ಪೂಜೆಯನ್ನು ಸಮಾಜಕಾರ್ಯವೆಂದು ಪರಿಭಾವಿಸಿದರೆ ಕಾರ್ಯವನ್ನು ತಿಳಿಸು ಮಾಡಬೇಕಾಗುತ್ತದೆ ಎಂಬುದನ್ನು ಈ ವಚನ ತೋರಿಸಿಕೊಡುತ್ತದೆ.

ತಿಳಿಯದೆ ಪೂಜಿಸಿದಡಾಗುವುದೇನೋ ಅಯ್ಯಾ

ತಿಳಿದು ತಿಳಿದು ಮಾಡಬೇಕು ಲಿಂಗ ಪೂಜೆಯ

ತಿಳಿದು ತಿಳಿದು ಮಾಡಬೇಕು ಜಂಗಮಾರ್ಚನೆಯ
ತಿಳಿದು ಮಾಡಬೇಕು, ತಿಳಿಯದೇ ಮಾಡಲು
ನಿನ್ನ ಸಿದ್ದಗೆ ಸಿದ್ಧರಾದರಲ್ಲದೆ ನಿನ್ನಂಗ ದೊರಕೊಂಬ
ಪರಿಯ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನ

ಅಂದರೆ ಈ ಮೇಲಿನ ವಚನವು ಬಸವಣ್ಣನವರ "ಮಾಡಿ ಮಾಡಿಕೆಟ್ಟರು ಮನವಿಲ್ಲದೆ" ಎಂಬ ಮಾತಿನಲ್ಲಿ ಬಸವಣ್ಣನವರು ಸುಮ್ಮನೆ ಒಂದು ಹವ್ಯಾಸದಂತೆ, ಒಂದು ನಿಯಮದಂತೆ ಪೂಜೆ ಮಾಡುವುದನ್ನು ಅತಿ ಸಂಕಟದಿಂದ ನೊಂದು ನುಡಿವ ರೀತಿಯಲ್ಲಿದ್ದರೆ ಸಿದ್ಧರಾಮರದು ಅರಿವೇ ಮುಖ್ಯ ಅರಿವಿಲ್ಲದೆ ತನ್ನನ್ನು ತಾನು ತಿಳಿದುಕೊಳ್ಳಲಾದ ಕೇವಲ ಸಾಂಪ್ರಾಯಿಕವಾಗಿ ಒಂದು ಆಚರಣೆಯಂತೆ ಅಥವಾ ಮನಸ್ಸಿಲ್ಲದೆ ಕೇವಲ ಇದನ್ನು ನಾನು ಮಾಡಲೇಬೇಕೆಂಬ ಹಠದಿಂದ ಮಾಡುವುದನ್ನು ಈ ರೀತಿ ಮಾಡುವವರು ಖಡಾ ಖಂಡಿತವಾಗಿ ನಿರಾಕರಿಸುವ, ಖಂಡಿಸುವ ವಚನವಾಗಿದೆ ಎಂಪಿಳಬಹುದು. ಅಂದರೆ ಪರರ ಹಿತವನ್ನು ಸಾಧಿಸಬೇಕಾದರೆ ತಿಳಿವು, ಅರಿವು ಅತ್ಯಗತ್ಯ ಪರರ ಹಿತವು ಸಮಸ್ಯೆಗಳನ್ನು ಬಿಡಿಸುವ ಮೂಲದಲ್ಲಿದೆ. ಇಂತಹ ಸಮಸ್ಯೆಗಳನ್ನು ಬಿಡಿಸುವುದು ಸುಲಭದ ಕೆಲಸವಲ್ಲ. ಇದಕ್ಕೆ ವಿಶೇಷವಾದ ಜ್ಞಾನ ಅರಿವು ಬೇಕಾಗುತ್ತದೆ. ಸಮಾಜಕಾರ್ಯಕ್ಕೆ ವಸ್ತುವಿನ ವೈಜ್ಞಾನಿಕ ಜ್ಞಾನ ಬೇಕಾಗುತ್ತದೆ. ಜೊತೆಗೆ "ಅರಿಯದ ಅರಿವನ" ಮಹಾಜ್ಞಾನದ ಅರಿವಿನ ಅಗತ್ಯವಿದೆ. ಇಂತಹ ಜ್ಞಾನ ಅರಿವಿನಿಂದ ತನ್ನ ಒಳಗನ್ನು ಅನ್ಯರ ಒಳಗನ್ನೂ ತಿಳಿದುಕೊಳ್ಳುವಂಥಹ ಅರಿವು ಮೂಡುತ್ತದೆ. ಇಂತಹ ಅರಿವಿನ ಸ್ವರೂಪ ಮತ್ತು ಜ್ಞಾನದ ತಿಳಿವಿನ ರೂಪವಾಗಿ ಯಶಸ್ವಿ ಸಮಾಜ ಸೇವಾಕರ್ತರಾಗಿ ಸಿದ್ಧರಾಮರು ಬೆಳೆದು ಬರುತ್ತಾರೆ.

## ಅಂತರಂಗದ ನಿಲವು

ಸಿದ್ಧರಾಮರು ಕೂಡ ಬಸವಣ್ಣರಂತೆ ಹಾಗೂ ಇತರ ಶರಣರಂತೆ ಒಳ ಹೊರಗೂ ಶುದ್ಧಿ ಜೀವನ ನಡೆಸಿದವರು. ಅನೇಕ ವೈರುಧ್ಯಗಳು ಇದ್ದರು ಕರ್ಮಯೋಗಿಯಾಗಿ ಲೋಕೋಪಕಾರ್ಯವನ್ನು ಮಾಡುತ್ತಿದ್ದ ಇವರು ತನ್ನ ತಿಳಿವಿಗಾಗಿ ತನ್ನ ಅಂತರಂಗದ ಒಳಹೊಕ್ಕು ಶೋಧನೆ ಮಾಡಿಕೊಂಡು ತನ್ನ ತಪ್ಪುಗಳನ್ನು ತಿದ್ದಿಕೊಳ್ಳುತ್ತಾ ಇತರ ಶರಣರ ಜೊತೆಗೆ ತಾನೂ ಒಬ್ಬ ಎಂದು ತಿಳಿಯುವುದು ಒಂದು ವ್ಯಕ್ತಿತ್ವಕ್ಕೆ ಪೂರಕವಾದ ವ್ಯಕ್ತಿತ್ವವಾಗಿದೆ. ಅಂದರೆ ಕಲ್ಯಾಣಕ್ಕೆ ಮುಂಚೆ ಆತ ತಾನೆ ಎಲ್ಲಾ ಎಂದು ತಿಳಿದುಕೊಂಡಿದ್ದರು ಕಲ್ಯಾಣಕ್ಕೆ ಬಂದ ನಂತರ ಚೆನ್ನಬಸವಣ್ಣನವರನ್ನು ಗುರು ಎಂದು ಸ್ವೀಕರಿಸಿ ಆತನಿಂದ ಇಷ್ಟಲಿಂಗವನ್ನು ಪಡೆದುಕೊಂಡು ಬಸವಣ್ಣರಿಂದ ಅಲ್ಲಮಪ್ರಭು ಅವರಿಂದ ಅಕ್ಕಮಹಾದೇವಿಯಂಥ ಇತರ ಶರಣರಿಂದ ಕಲಿತು ತಿಳಿದುಕೊಂಡು ಬೆಳೆದು ಒಂದು ಅಪ್ರತಿಮ ಚೇತನ ವ್ಯಕ್ತಿಯಾಗಿ ಹೊರಹೊಮ್ಮಿದ್ದಾರೆ. ಅರಿವಿನೆಡೆಗೆ ಪಯಣ ಮಾಡಿದ್ದ ಸಿದ್ಧರಾಮರು ತನ್ನ ತಾನು ತಿಳಿಯುವುದು

ಸುಲಭದ ಕಾರ್ಯವಲ್ಲವೆಂದೇ ಹೇಳುತ್ತಾರೆ.

ಪತ್ರೆಯ ನೇಮದವರು ಒಂದುಕೋಟಿ
ಲಿಂಗಾರ್ಚನೆಯ ನೇಮದವರು ಒಂದುಕೋಟಿ
ಜಂಗಮ ತೃಪ್ತಿಯವರು ಒಂದುಕೋಟಿ
ತನ್ನತಾ ತಿಳಿಯುವ ನೇಮದವರು ಒಬ್ಬರೂ ಇಲ್ಲವಯ್ಯ
ಕಪಿಲಸಿದ್ಧ ಮಲ್ಲಿಕಾರ್ಜುನಾ
ಮನದಲ್ಲಿ ಸಂಕಲ್ಪ ವಿಕಲ್ಪಗಳು ನೋಡಯ್ಯ
ಮನಸ್ಸಿನ ಕಾರ್ಯವೇ ಪುಣ್ಯಪಾಪ ನೋಡಯ್ಯ
'ಮನಃಕಾರ್ಯಂ ಜಗದ್ದೇದಂ' ಎಂಬುದು ಹುಸಿಯಲ್ಲ
ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ

ಈ ರೀತಿಯಲ್ಲಿ ಜ್ಞಾನಕ್ಕೆ ಹೆಚ್ಚಿನ ಆದ್ಯತೆ ಮತ್ತು ತನ್ನ ತಾನರಿತುಕೊಂಡು ಜೀವಿಸುವವನು ಯಾವಿದೇ ಪಾಪಕಾರ್ಯವನ್ನಾಗಲಿ ತಪ್ಪನ್ನಾಗಲಿ ಮಾಡಲಾರನೆಂದು ಹೇಳುವುದು ಕೇವಲ ಒಂದು ಸಮಾಜಕ್ಕೆ ಬುದ್ಧಿವಾದ ಎಂದು ಅನಿಸದೇ ತನ್ನ ವ್ಯಕ್ತಿತ್ವಕ್ಕೆ ತಾನು ಅನುಭವಿಸಿ ಕಂಡುಂಡ ಸತ್ಯ ಸಂಗತಿಗಳಾಗಿ ಬಿಂಬಿತಗೊಂಡಿವೆ. ಶರಣರಲ್ಲಿ ಬಹಳಷ್ಟು ಜನ ಈ ಅಂತರಂಗದ ಶೋಧನೆಗೆ ಪ್ರಾಮುಖ್ಯ ನೀಡಿರುವುದು ಒಂದು ಆದರ್ಶಯುತ ಸಮಾಜಕ್ಕೆ ತನ್ನಿಂದಲೇ ಒಂದು ಬಲಿಷ್ಠ ಬುನಾದಿ ಕಲ್ಲಾಗಲಿ ಎಂಬುದು ಎಂದು ನಮಗೆ ಅನ್ನಿಸುತ್ತದೆ. ಏಕೆಂದರೆ ಒಂದು ಸುಂದರ ಸಮಾಜದ ಸತ್ಯ, ನಿಷ್ಠೆ, ಭಕ್ತಿ, ಕಾಯಕ ಮುಂತಾದ ತತ್ವಗಳಲಿಂದ ಕೂಡಿದ ಆದರ್ಶಯುತ ಸಮಾಜದ ಆಶಯ ಹೊತ್ತುಕೊಂಡಿದ್ದರಿಂದ ಎಲ್ಲಾ ಶರಣರು ತಮ್ಮ ತಪ್ಪುಗಳನ್ನು ತಿದ್ದುಕೊಳ್ಳುತ್ತಾ ಇತರರು ಮಾಡುವ ತಪ್ಪಗಳನ್ನು ಎಚ್ಚರಿಸುತ್ತಾ ಸಮಾಜಕ್ಕೆ ಸರಿದಾರಿ ತೋರುವ ನಿಟ್ಟಿನಲ್ಲಿ ಕಾರ್ಯನಿರ್ವಹಿಸಿದರು. ಅದರಂತೆ ಸಿದ್ಧರಾಮರು ಭಿನ್ನ ನೆಲೆಯಲ್ಲಿ ನಿಂದ ತನ್ನ ಕಾರ್ಯಕ್ಷೇತ್ರದಲ್ಲಿ ಅನೇಕ ಲೋಕೋಪಯೋಗಿ ಕಾರ್ಯಗಳನ್ನು ಮಾಡುತ್ತಾ ತನ್ನ ಅಂತರಂಗದ ಅರಿವನ್ನು ಕಾಣುವಂತ ಶಕ್ತಿವಂತನಾಗಿ ಬೆಳೆದು ಅಂತರಂಗ ಮತ್ತು ಬಹಿರಂಗ ನಡೆನುಡಿಗಳಲ್ಲಿ ಏಕವಾಗಿ ನಿಂತಂತ ವ್ಯಕ್ತಿತ್ವ ಸಿದ್ಧರಾಮರದು.

### ಅಕ್ಕಮಹಾದೇವಿ

ಕನ್ನಡ ನಾಡಿನಲ್ಲಿ ಹನ್ನೆರಡನೇ ಶತಮಾನದಲ್ಲಿಯೇ ತನ್ನ ವೈಚಾರಿಕತೆ, ಭಕ್ತಿ ಹಾಗೂ ಆತ್ಮಾಪ್ರೇತ್ಯದಿಂದ ಹೆಣ್ಣಿನ ಬಗ್ಗೆ ಗೌರವಯುತ ಸ್ಥಾನಮಾನವನ್ನು ತಂದುಕೊಟ್ಟಿದ್ದ ಅಕ್ಕಮಹಾದೇವಿ ಸ್ತ್ರೀ ಸ್ವಾತಂತ್ರ್ಯಕ್ಕಾಗಿ, ಸಮಾನತೆಗಾಗಿ ಮೊಟ್ಟ ಮೊದಲನೆಯದಾಗಿ ಇಡೀ ಭಾರತದಲ್ಲಿಯೆ ಬಂಡೆದ್ದ ಬಂಡಾಯಗಾರ್ತಿ ಎಂದರೆ ತಪ್ಪಾಗಲಿಕ್ಕಿಲ್ಲ. ಅಂತಹ ಅಕ್ಕಮಹಾದೇವಿಯು

ಬಸವಣ್ಣನವರ ನೇತೃತ್ವದಲ್ಲಿ ನಡೆದ ಶರಣ ಚಳುವಳಿಯ ಮುಖ್ಯರಲ್ಲಿ ಒಬ್ಬಳಾಗಿ ಕಾಣುತ್ತಾಳೆ. ನಾವು ಅಕ್ಕಮಹಾದೇವಿಯನ್ನು ಹನ್ನೆರಡನೇ ಶತಮಾನದ ಸಾಮಾಜಿಕ, ಧಾರ್ಮಿಕ ಸ್ವರೂಪದ ಚಳುವಳಿಯೊಂದಿಗೆ ಗುರುತಿಸುತ್ತೇವೆ. ಈ ಚಳುವಳಿಯಲ್ಲಿ ಆಕೆಯದು ಗಮನೀಯವಾದ ಪಾತ್ರವಾದರೂ ಆಕೆಗೂ ಮತ್ತು ಈ ಚಳುವಳಿಗೂ ಇದ್ದ ಸಂಬಂಧ ಕೇವಲ ಸ್ವಲ್ಪ ಸಮಯದ್ದು ಅಂದರೆ ತಾತ್ಕಾಲಿಕವಾದದ್ದು ಎಂದೇ ಹೇಳಬೇಕಾಗುತ್ತದೆ. ಜಿ.ಎಸ್. ಶಿವರುದ್ರಪ್ಪನವರು ಹೇಳುವಂತೆ "ನಾವು ಅಕ್ಕಮಹಾದೇವಿಯ ವ್ಯಕ್ತಿತ್ವವನ್ನು ಹನ್ನೆರಡನೇ ಶತಮಾನದ ಸಾಮಾಜಿಕ, ಧಾರ್ಮಿಕ ಸ್ವರೂಪದ ವಚನ ಚಳುವಳಿಯೊಂದಿಗೆ ಗುರುತಿಸುತ್ತೇವೆಯಾದರೂ, ಆಕೆಗೂ ಈ ಚಳುವಳಿಗೂ ಇದ್ದ ಸಂಬಂಧ ಕೇವಲ ಆಗಂತುಕವೂ, ತಾತ್ಕಾಲಿಕವೂ ಆದದ್ದೆಂಬುದು ನಿಜ"[4] ಅಂದರೆ ಎಡುತಡಿಯಿಂದ ಅಕ್ಕಮಹಾದೇವಿ ಬರುವ ಮುಂಚೆಯೆ ಬಸವಣ್ಣನವರು ಮಂತ್ರಿ ಪದವಿಯಲ್ಲಿದ್ದುಕೊಂಡು ಸಮಾಜದ ಕೆಳಸ್ತರದ ಜನರಿಗೆ ಜ್ಞಾನವನ್ನರಿಸಿ ಬರುವಂತ ಎಲ್ಲಾ ನಿಷ್ಠವಂತ ಭಕ್ತರಿಗೆ ಆಶ್ರಯವನ್ನಿತ್ತದ್ದನು. ಜೊತೆಗೆ ಅಲ್ಲಮಪ್ರಭುವಿನ ಆಗಮನವು ಆಗಿತ್ತು. ಸಿದ್ಧರಾಮರು ಮುಂತಾದ ಶರಣರ ದಂಡೇ ಅಲ್ಲಿಗೆ ದೌಡಾಯಿಸಿತ್ತು. ಜೊತೆಗೆ ಅನೇಕ ಜನಪರ ಕಾಳಜಿಯ ಕಾರ್ಯಗಳು ಸಾಗಿದ್ದವು. ಬಹುಶಃ ಅಕ್ಕನು, ಬಸವಣ್ಣ ಮತ್ತು ಶರಣರ ಈ ಕಲ್ಯಾಣದ ಕಾರ್ಯಗಳನ್ನು ಇತರರಿಂದ ತಿಳಿದುಕೊಂಡು ತಾನು ಹೊಂದಿದ್ದ ಗುರಿಯನ್ನು ಮುಟ್ಟಲು ಸಹಕಾರವನ್ನು ಅರಸಿಕೊಂಡು ಬಂದಿರಬಹುದು ಅಥವಾ ಜ್ಞಾನ ಪಿಪಾಶುವಾಗಿ ತನ್ನ ಸಾಧನೆಗೆ ಇಲ್ಲಿ ಮಾರ್ಗ ದೊರೆಕಬಹುದೆಂಬ ಆಶಾಭಾವನೆಯಿಂದ ಬಂದು ಇಲ್ಲಿ ಕೆಲಕಾಲ ನೆಲೆಸಿರಬಹುದು. ಇಂತಹ ಸಂದರ್ಭದಲ್ಲಿ ಅನೇಕ ವಚನಗಳನ್ನು ರಚಿಸುವಂತ ಸೂಕ್ಷ್ಮ ಸಮವೇದನಾಶೀಲ ಮನಸ್ಸಿನ ಕವಯತ್ರಿಯೂ ಕೂಡ ಆಗಿ ಹೊರಹೊಮ್ಮಿದ್ದಾಳೆ. ಇದರಿಂದ ಶರಣ ಸಮೂದಾಯದಿಂದ ಉನ್ನತ ಸ್ಥಾನಮಾನದ ಜೊತೆಗೆ ಗೌರವಯುತ ಸ್ಥಾನವನ್ನು ಪಡೆದಳು. ತನ್ನ ವಿಶಿಷ್ಟ ವ್ಯಕ್ತಿತ್ವ ಹಾಗೂ ಅನುಭಾವದ ಆಳದಿಂದ, ವೈಚಾರಿಕತೆಯ ನಿಲುವುಗಳಿಂದ ಇಡೀ ಸಮಾಜ ಹಾಗೂ ಶರಣ ಸಮುದಾಯವನ್ನೇ ಬೆರಗುಗೊಳಿಸಿ ಬಸವಣ್ಣನಿಂದ ಹಿಡಿದು ಎಲ್ಲಾ ಶರಣರಿಂದ 'ಅಕ್ಕ' ಎಂದು ಕರೆಸಿಕೊಳ್ಳುವ ಗೌರವಕ್ಕೆ ಪಾತ್ರಳಾದ ವ್ಯಕ್ತಿತ್ವ ಅಕ್ಕಮಹಾದೇವಿಯದು. ಕೌಶಿಕನ ಅರಮನೆಯನ್ನು ತ್ಯಾಜಿಸಿ ಬೆತ್ತಲೆಯಾಗಿ ತನ್ನ ಪತಿ ಪರಮದೈಮಪ್ಪಿವ ಚನ್ನಮಲ್ಲಿಕಾರ್ಜುನನೆಂದು ತಿಳಿದು ಅವನೊಂದಿಗೆ ಆಧ್ಯಾತ್ಮಿಕ ಸಂಗಬಯಸಿ ಅವನೆಡೆಗೆ ದಾರಿ ಹಿಡಿದು ಹೊರಬರುತ್ತಾಳೆ. ಈ ಅವದಿಯಲ್ಲೇ ಆಕೆಗೆ ತನ್ನ ತಾತ್ವಿಕ ನಿಲುವುಗಳು ಹಾಗೂ ಜೀವನ ವಿಧಾನದ ಪರಿಕಲ್ಪನೆಗಳು ಸಾಮಾಜಿಕ ದೃಷ್ಟಿಕೋನಗಳು ತಿಳಿದಿದ್ದವು.

ಆದರೆ ಅಕ್ಕಮಹಾದೇವಿ ಶರಣ ಚಳುವಳಿಗೆ ಬಂದು ಸೇರುವ ಹೊತ್ತಿಗಾಗಲೇ ಶರಣ ಧರ್ಮದ ತಾತ್ವಿಕ ನಿಲುವುಗಳು, ಸಾಮಾಜಿಕ ದೃಷ್ಟಿಕೋನಗಳು ಸಿದ್ಧವಾಗಿದ್ದವು. ಇವುಗಳಲ್ಲಿ ಅನೇಕ ಸಂಗತಿಗಳು ಆಕೆಯ ಅಭಿವ್ಯಕ್ತಿಗೆ, ಅಭಿಪ್ರಾಯಕ್ಕೆ ಹೊಂದಿಕೆಯಾಗದೇ ಹೋದವೆಂಬುದು ನಾವು ಮನಗಾಣಬೇಕಾದ ವಿಷಯವಾಗಿದೆ. ಈ ನೆಲೆಯಲ್ಲಿ ಅಕ್ಕಮಹಾದೇವಿ ಇತರೆ ವಚನಕಾರರಿಗಿಂತ ಬೇರೆಯಾಗಿ ವಿಶಿಷ್ಟ ವ್ಯಕ್ತಿತ್ವವಾಗಿ ನಿಲ್ಲುತ್ತಾಳೆ.

ಎಲ್ಲಾ ಅನುಭಾವಿಗಳಿರುವಂತೆ ಪುರಾಣ, ವೇದ, ಉಪನಿಷತ್ತುಗಳ ಆಗಮಗಳ ನಿರಾಕರಣೆ

ಪರಂಪರಾಗತವಾಗಿ ರೂಢಿಯಲ್ಲಿ ಜಾತಿ ವರ್ಗ ಪದ್ಧತಿಗಳನ್ನು ಕುರಿತು ವಿರೋಧದ ಬಗ್ಗೆ ತತ್ಸಾರ ಭಾವದ ವಿರುದ್ಧ ಇಂತಹ ಹಲವಾರು ವಿಚಾರದಲ್ಲಿ ಅಕ್ಕಮಹಾದೇವಿಗೆ ಬಸವಾದಿ ಶರಣರ ವಚನ ಚಳವಳಿಯೊಂದಿಗೆ ಸಹಮತವಿದ್ದರೂ, ಹೆಣ್ಣಿನ ಕುರಿತು ಮಾಹೆಯೆಂದು ಕರೆಯಲ್ಪಟ್ಟುದುದರ ಕುರಿತ ಅವಳ ನಿಲುವು ತೀರಾ ವೈಶಿಷ್ಟ್ಯಪೂರ್ಣನವಾದುದು. ಏಕೆಂದರೆ ಪುರುಷ ಪ್ರಧಾನವಾದ ಈ ಹೇಳಿಕೆ ದಬ್ಬಾಳಿಕೆಗೆ ಪೂರಕವಾಗಿ ಪುರುಷನ ಲೋಕ ವಿರೋಧ ನೀತಿಯಿಂದ ಹುಟ್ಟಿಕೊಂಡಿದ್ದು. ಆದರೆ ಅಕ್ಕ ಇದನ್ನು ಮೊಟ್ಟ ಮೊದಲಿಗೆ ಸ್ತ್ರೀ ಪರವಾಗಿ ನಿರೂಪಿಸುವುದು ತೀರ ವಿಶಿಷ್ಟ ಸ್ವರೂಪದ್ದಾಗಿದೆ.

ಪುರುಷನ ಮುಂದೆ ಮಾಯೆ
ಸ್ತ್ರೀ ಎಂಬ ಅಭಿಮಾನವಾಗಿ ಕಾಡಿತ್ತು ನೋಡಾ
ಸ್ತ್ರೀ ಮುಂದೆ ಮಾಯೆ
ಪುರುಷನೆಂಬ ಅಭಿಮಾನವಾಗಿ ಕಾಡಿತ್ತು ನೋಡಾ
ಲೋಕವೆಂಬ ಮಾಯೆಗೆ ಶಿವಶರಣರ ಚರಿತ್ರೆ
ಮರುಳಾಗಿ ತೋರಿಹುದು ಚನ್ನಮಲ್ಲಿಕಾರ್ಜುನ
ಒಲಿದ ಶರಣರಿಗೆ ಮಾಯಯೂ ಅಲ್ಲ
ಮರಹವು ಇಲ್ಲ ಅಭಿಮಾನವು ಇಲ್ಲ[೫]

ಹೆಣ್ಣನ್ನು ಮಾಯ ಎಂದು ಸಮಾಜದಲ್ಲಿ ಅತ್ಯಂತ ಕೀಳಸ್ತರದ ಭಾವದೊಂದಿಗೆ ಕಾಣಲಾಗುತ್ತಿದ್ದ ಕಾಲಘಟ್ಟದಲ್ಲಿ ಹೆಣ್ಣಾದ ಅಕ್ಕಮಹಾದೇವಿಉ ನಿರ್ಭಿಡೆಯಿಂದ, ಧೈರ್ಯದಿಂದ ಹೇಳಿದ ಮಾತುಗಳು ಒಂದು ಹೊಸ ಸಂಚಲನವನ್ನೇ ಮೂಡಿಸಿರಬಹುದು. ಏಕೆಂದರೆ ಆಧ್ಯಾತ್ಮದ ಸಾಧನೆಯ ಪರಮ ಗುರಿಯೆಂದು ಸಾಗಿ ಬಂದ ಅಕ್ಕನು, ಸಮಾಜದ ಶೋಷಿತ ವರ್ಗವನ್ನು ಮತ್ತು ಶೋಷಣೆ ಮಾಡುವ ವರ್ಗವನ್ನು ಆಸಕ್ತಿಯಿಂದ ದಮನಿಸಿ ಜೊತೆಗೆ ತಾನೇ ಅಂತಹ ಕಠಿಣ ಪರಿಸ್ಥಿತಿಯನ್ನು ಅನುಭವಿಸಿ ಅದಕ್ಕೆ ಉತ್ತರೋಪಾಯಲ್ಲಿ ಈ ಮಾತನ್ನು ಹೇಳಿರಬಹುದಾಗಿದೆ. ಜೊತೆಗೆ ಶರಣ ಚಳುವಳಿಯಲ್ಲಿ ಮುಖ್ಯವಾಗಿ ಸಮಾಜ ಹಿಂದುಳಿದ ವರ್ಗದ ಕೆಳಸ್ತರದವರಿಗೆ ಪ್ರಾಸ್ತ್ಯ ನೀಡುವುದರ ಜೊತೆಗೆ ಮಹಿಳೆಯರಿಗೆ ಪ್ರಾಶಸ್ತ್ಯ ಮತ್ತು ಪ್ರಾತಿನಿಧ್ಯವನ್ನು ನೀಡಲಾಗಿತ್ತು. ಅನವರತ ಹೆಣ್ಣಿನ್ನು ಮಾಯೆ ಎಂಬ ಅರ್ಥವ ಕಲ್ಪಿಸಿಕೊಂಡು ಅವಳ ಸ್ಥಾನಮಾನವನ್ನು ಕಿತ್ತುಕೊಂಡು ಪುರುಷ ಶ್ರೇಷ್ಠನೆಂಬ ಉದ್ಘೋಷಗಳ ಪ್ರಚಲಿತಗೊಂಡಿದ್ದವು. ಇದರಿಂದ ಮಾಯೆ ಎಂಬುದು ಕೇವಲ ಸ್ತ್ರೀಗೆ ಮಾತ್ರ ಸಂಬೋಧಿಸುವ ಶಬ್ದವಲ್ಲ. ಮಾಯೆ ಎಂಬುದು ಹೆಣ್ಣಿನ ಪಾಲಿಗೆ ಗಂಡು ಮಾಯೆ, ಗಂಡಿನ ಪಾಲಿಗೆ ಹೆಣ್ಣು ಮಾಯೆ ಎಂಬ ಹೊಸ ದೃಷ್ಟಕೋನದ ನಿಲುವು ಮಹಿಳಾ ಪರವಾಗಿದೆ.ವಚನ ಚಳುವಳಿಯಲ್ಲಿ ಅಕ್ಕಮಹಾದೇವಿಯ ವಿಚಾರಗಳೂ, ಆಕೆಯ ದೃಷ್ಟಿಕೋನವೂ ಸ್ವಾರಸ್ಯವಾಗಿಯೂ ವಿಶಿಷ್ಟವಾಗಿರುವುದು ಆಗಿವೆ. ಬಸವಾದಿಶರಣರು ಆಧ್ಯಾತ್ಮದ ಸಾಧನೆಯೊಂದಿಗೆ ಲೌಕಿಕ ಜೀವನವನ್ನು ಒಪ್ಪಿಕೊಂಡಿದ್ದರು. ಜೇಡರ ದಾಸಿಮಯ್ಯನ ಮಾತು "ಸತಿ ಪತಿಗಳಿಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ" ಎನ್ನುವಂತಹದ್ದು. ಬಸವಣ್ಣನವರ "ಮೃತ್ಯುಲೋಕವೆಂಬುದು ಕತ್ತರನ ಕಮ್ಮಟವಯ್ಯ" ಎಂಬ ಮಾತನ್ನು ಗಮನಿಸಬಹುದು. ಇದರಿಂದ ಶರಣ ಚಳವಳಿಯಲ್ಲಿ ಗ್ರಹಸ್ತರೆ ಹೆಚ್ಚಾಗಿ

ಪಾಲ್ಗೊಂಡರು. ಅಲ್ಲದೆ ಗ್ರಹಸ್ತರಾದವರು ಆಧ್ಯಾತ್ಮ ಸಾಧನೆಗೆ ಅರ್ಹರಲ್ಲ ಎಂಬ ಆತಂಕದ ನುಡಿಯನ್ನು ಆರಣರು ಹೇಳಿದವರಲ್ಲ. ಹೀಗಿರುವಾಗ ಲೌಕಿಕ ದಾಂಪತ್ಯದ ಮೂಲವಾದ ಮದುವೆಯ ಕಲ್ಪನೆಯನ್ನು ಮಹಾದೇವಿ ಪ್ರಶ್ನಿಸಿದಳು. ಮತ್ತು ತಾನು ಮದುವೆಯಾದ ಗಂಡನನ್ನು ಬಿಟ್ಟು ಬಂದ ಈ ಹೆಣ್ಣುಮಗಳ ನಡುವಳಿಕೆಯೂ ಈ ಶರಣ ಚಳುವಳಿಯ ನಿಲುವಿಗೆ ವಿರೋಧದಂತೆ ಕಂಡರೂ, ಇದಕ್ಕೆ ಸಮಾನವೆಂಬಂತೆ ಅಲ್ಲಮಪ್ರಭು ಮತ್ತು ಸಿದ್ಧರಾಮರು ತಮ್ಮ ಆಧ್ಯಾತ್ಮ ಸಾಧನೆಗೆ ಸಾನ್ಯಾಸಿಗಳಾಗಿಯೆ ಬಂದರು. ಇದರಿಂದ ಈ ವಚನ ಚಳುವಳಿಯಲ್ಲಿ ಪಾಲ್ಗೊಂಡ ಅನೇಕ ಮಹಿಳೆಯರಿಗೆ ಅಕ್ಕಮಹಾದೇವಿ ಮಾರ್ಗದರ್ಶಕಳಾದಳು. ಅಕ್ಕ ಮದುವೆಯನ್ನು ನಿರಾಕರಿಸಿದವಳಲ್ಲ. ಮದುವೆ ಎಂಬ ವ್ಯವಸ್ಥೆಯನ್ನು ತಿರಸ್ಕರಿಸಿದಳು, ಪ್ರತಿಭಟಿಸಿದಳು ಇದರಲ್ಲಿ ಪುರುಷನ ದಬ್ಬಾಳಿಕೆಗೆ ಹೆಣ್ಣು ಬಲಿಯಾಗುವ ಪದ್ಧತಿಯನ್ನು, ಹೆಣ್ಣಿನ ಸಾತಂತ್ರ್ಯವನ್ನು ಮಾರುವ ಪದ್ಧತಿಯ ವಿರುದ್ಧ ಪ್ರತಿಭಟಿಸಿದಳು. ಶರಣ ತತ್ವದಂತೆ ಶರಣ ಸತಿ ಲಿಂಗಪತಿ ಎಂಬ ಅನುಭಾವಿಕ ಗಂಡನನನು ತನ್ನ ಆರಾಧ್ಯ ದೈವ ಎಂದು ಪರಿಭಾವಿಸಿಕೊಂಡಳು. ಬಸವಣ್ಣವಾದಿಯಾಗಿ ಎಲ್ಲರು 'ಶರಣಸತಿ ಲಿಂಗಪತಿ'ಯ ಭಾವದಲ್ಲಿ ತಮ್ಮ ವ್ಯಕ್ತಿತ್ವವನ್ನು ನಿರ್ಮಿಸಿಕೊಂಡಿದ್ದಾರೆ. ಇದರಿಂದ ಅಕ್ಕಮಹಾದೇವಿಯ ಈ ನಿಲುವು ಸಹಜವಾದುದಾಗಿದೆ. ಅನೇಕ ಶಿವಶರಣರ ನಡುವೆ ಈಕೆಯೊಬ್ಬಳೆ. ತನ್ನ ದೈವ ಮಲ್ಲಿಕಾರ್ಜುನನೆ ಪತಿ ಎಂಬ ಭಾವದಲ್ಲಿ ಇದ್ದವಳು. ಇದು ಅವಳ ಅನುಭಾವಕ್ಕೆ ಸಹಜವಾಗಿದೆ. ಯಾಕೆಂದರೆ ಲೌಕಿಕವಾದ ಜೀವನವನ್ನು ತ್ಯಜಿಸಿ ತನ್ನ ಅನುಭಾವದ ಗಮ್ಯವಾದ ಗಂಡನ ಅನ್ವಿಷಣೆಗೆ ಹೊರಟಳು ಅಕ್ಕ. ಇದು ಕೇವಲ ಲೌಕಿಕವಾದದ್ದು ಅಲ್ಲ, ಇದು ಮಹಾದೇವಿಯ ಅನುಭಾವದ ಮೂಲ ನೆಲೆಯಾಗಿದೆ.

> ಹರನೇ ನೀ ನೆನಗೆ ಗಂಡನಾಗಬೇಕೆಂದು ಅನಂತಕಾಲ ತಪಿಸಿದ್ದೇ ನೋಡ
> ಹಸೆಯ ಮನೆಯ ಮಾಡ ಬೆರೆಸಲ್ಪಟ್ಟಿದ್ದರ
> ಭಸ್ಮವಸಿ ಹೊಸ ಕಂಕಣ ಕಟ್ಟಿದರು
> ಚನ್ನಮಲ್ಲಿಕಾರ್ಜುನನಿಗೆ ನೀನಾಗಬೇಕೆಂದು

ಎಂಬ ಅವಳ ಮಾತಿನಲ್ಲಿಯೇ ಸೂಚಿತವಾಗಿದೆ. ತಾತ್ವಿಕವಾಗಿ ನೋಡಿದರೆ ಜೀವ ಮತ್ತು ದೈವದ ಸಂಬಂಧ ಸನಾತನವಾದುದು ಅಕ್ಕ ಈ ನೀತಿಯ ನಿದರ್ಶನದಂತೆ ಇದ್ದಾಳೆ. ಆಕೆ ತನ್ನ ಹಾಗೂ ತನ್ನ ದೇವ ಪತಿಯ ನಡುವೆ ಸನಾತನ ಸಂಬಂಧ ಗುರುತಿಸಿಕೊಳ್ಳುತ್ತಾಳೆ. ಆಗ ಸಹಜವಾಗಿ ಲೌಕಿಕ ಜೀವನದ ದಾಂಪತ್ಯ ಅರ್ಥ ಹೀನವಾಗುತ್ತದೆ. "ಇಹಕ್ಕೊಬ್ಬ ಗಂಡನೆ ಪರಕ್ಕೊಬ್ಬ ಗಂಡನೆ"? ಎಂಬ ಅವಳ ಪ್ರಶ್ನೆ ಸಹಜವಾಗಿ ಮೂಡಿಬಂದಿದೆ. ಈ ಲೋಕದ ಗಂಡರು "ಸಾವಕೆಡುವ" ಗಂಡರಾಗಿ ಕಾಣುತ್ತಾರೆ. ಆದ್ದರಿಂದ "ಸಾವಿಲ್ಲದ ಕೇಡಿಲ್ಲದ" ಅನುಭಾವಿಕ ಪತಿಯನ್ನು ಅರಸುತ್ತಾಳೆ. ಆದಕಾರಣದಿಂದಲೇಏನೋ. ಕೌಶಿಕನು ದಬ್ಬಾಳಿಕೆಯ ನೀತಿಯಿಂದ ಅವಳನ್ನು ಮದುವೆಯಾದರೂ ಅದು ಅವಳಿಗೆ ಹರಿಹರನು ವರ್ಣಿಸುವಂತೆ "ವಿಷಮ ಸುಖ ಸಂಪತ್ ಸಂಯೋಗ ಸನ್ನಿದಿಯಾಗಿತ್ತು"[5] ಇದರಿಂದ ಅಕ್ಕನು ಅವನನನು ತ್ಯಜಿಸಿ ಲೌಕಿಕ ಜೀವನವನ್ನು ಪರಿಪೂರ್ಣವಾಗಿ ತ್ಯಜಿಸಿ ಹೊರಗೆ ಬರುತ್ತಾಳೆ. ನಾವು ಈ ಮೊದಲು ಹೇಳಿದಂತೆ ಅಕ್ಕ ತನಗೆ ಚನ್ನಮಲ್ಲಿಕಾರ್ಜುನನೊಡನೆ ಆಗಲೇ ಮದುವೆಯಾಗಿದೆ ಎನ್ನುವ ಸಂಗತಿಗಳಿರುವ ಹಲವಾರು ವಚನಗಳಿವೆ.

ಪ್ರತಿಕ್ರಿಯೆಯೇ ಎಂಬಂತೆ ಪ್ರತ್ಯೇಕವಾಗಿಯೇ ಕಾಣುತ್ತದೆ. ಆದರೂ ಸಹ ಅಕ್ಕಮಹಾದೇವಿ ಸಂಸಾರಿಕ ಜೀವನವನ್ನು ತುಚ್ಛವಾಗಿ ಕಾಣುವುದಿಲ್ಲ. ಅದಕ್ಕೆ ನಿದರ್ಶನ ಅಕ್ಕನ ಈ ವಚನ.

ಹಾವಿನ ಬಾಯಿ ಹಲ್ಲಕಳೆದು

ಹಾವಾಡಿಸ ಬಲ್ಲಡೆ ಹಾವಿನ ಸಂಗವೇ ಲೇಸು ಕಂಡಯ್ಯಾ

...................

ಚನ್ನಮಲ್ಲಿಕಾರ್ಜುನ ನೀನೊಲಿದವರು

ಕಾಯಗೊಂಡಿದ್ದವರೆನ ಬೇಅಂದರೆ ಸಂಸಾರಿಕವೆಂಬುದು ತ್ಯಜ್ಯವೇನಲ್ಲ, ಆದರೆ ವಿಷದ ಹಲ್ಲುಗಳನ್ನು ಅಂದರೆ ಕಾಮ-ಕ್ರೋದಾದಿಗಳನ್ನು ಕಿತ್ತುಹಾಕಿ ಬದುಕುವುದಾದರೆ ಹಾವಿನ ಸಂಗ ಸಂಸಾರದ ಸಂಗದಲ್ಲಿರುವುದೇ ಮೇಲು ಮತ್ತು ಆ ದೈವದ ಒಲುಮೆಯು ಅಗತ್ಯ. ಆದ್ದರಿಂದ ಭಕ್ತರಾಗಿ ಸಂಸಾರದಲ್ಲಿದ್ದೂ ಗೌರವಕ್ಕೆ ಅರ್ಹರು ಎಂಬುದು ಕೂಡ ಅಕ್ಕನ ನಿಲುವು ಜಿ.ಎಸ್.ಎಸ್. ಹೇಳಿದಂತೆ "ಅಕ್ಕನ ಅನುಭಾವ ಚನ್ನಮಲ್ಲಿಕಾರ್ಜುನನ್ನು ಕುರಿತ ಕನಸು, ಹಂಬಲ ಹಾಗ ತಿಳುವಳಿಕೆಗಳ ಅನ್ವೇಷಣೆಯ ಸ್ಥಿತಿಯಾಗಿರುವುದರಿಂದ ಮುಖ್ಯವಅದು ಅಂತರ್ಮುಖಿ ಪ್ರವೃತ್ತಿಯಾಗಿದೆ. ಬಸವಣ್ಣನವರದು ಮುಖ್ಯವಾಗಿ ಸಮಾಜ ಕ್ಷೇತ್ರದ ಬಹಿರ್ಮುಖ ಪ್ರವೃತ್ತಿ; ಅಲ್ಲಮನದಾದರೋ ಇದ್ದೂ ಇಲ್ಲದಂತಹ ನೆಲೆಯಲ್ಲಿ ಸಂಚರಿಸುತ್ತಾ ಈ ಎಲ್ಲವನ್ನು ಮೀರಿದ ಒಂದು ಉರ್ಧ್ವಮುಖಿ ಪ್ರವೃತ್ತಿ ಅಕ್ಕನದು ಅಂತರ್ಮುಖಿ ಪ್ರವೃತ್ತಿಯಾದುದರಿಂದ ಸಮಾಜ ಸುಧಾರಣ ಪರವಾದ ಕಾಳಜಿಗಳು ಅವಳಲ್ಲಿ ಅಷ್ಟಾಗಿ ಕಾಣಿಸುವುದಿಲ್ಲ. ಆಕೆ ತನ್ನೊಂದಿಗೆ ತಾನು ಮಾತಾಡಿಕೊಂಡುದ್ದು ಅದ್ಭುತವಾದ ಭಾವಗೀತೆಯಗುಣವನ್ನು ಪ್ರಕಟಿಸುತ್ತವೆ. ಸಮಾಧಾನಕ್ಕೆ ಹಾಗೂ ತನ್ನ ನಡುವಳಿಕೆಯ ಸಮರ್ಥನೆಗೆ"[೭] ಎಂದು ಜಿ.ಎಸ್. ಶಿವರುದ್ರಪ್ಪನವರು ಅಕ್ಕನ ಅಂತರ್ಮುಖಿ ಪ್ರವೃತ್ತಿಯನ್ನು ಗುರುತಿಸುತ್ತಾ ಆಕೆಗೆ ಸಮಾಜ ಪರ ಕಾಳಜಿಗಳು ಕಡಿಮೆ ಇದ್ದವು ಎಂಬ ನಿರ್ಣಯಕ್ಕೆ ಬರುತ್ತಾರೆ. ಅದು ಒಂದು ರೀತಿಯಲ್ಲಿ ಸರಿ ಕಂಡರು ಆಕೆ ಸಮಾಜ ಪರ ಕಾಳಜಿಯಿಂದಲೇ ಸಮಾಜದ ಏಳಿಗೆಗಾಗಿ ನಡೆದಂತಹ ಕಲ್ಯಾಣದ ಆರಣರ ಆಂದೋಲನಕ್ಕೆ ಬಂದು ಭಾಗವಹಿಸುವುದನ್ನು ನೋಡಿದರೆ. ಅಲ್ಲದೆ ಅಕ್ಕನ ಅನೇಕ ವಚನಗಳು ನಮ್ಮಲ್ಲಿ ಇನ್ನೂ ಲಭ್ಯವಿಲ್ಲದ್ದರಿಂದ ಸಮಾಜ ಪರ ಕಾಳಜಿಯಿರುವ ವಚನಗಳು ಅನೇಕ ಲಭ್ಯವಿಲ್ಲದಿದ್ದರೂ ಬಹಳಷ್ಟು ಅಭ್ಯವಿಲ್ಲ ಆದ್ದರಿಂದ ಈ ನಿರ್ಧಾರ ನನಗೆ ಉಚಿತವೆಂದು ಕಾಣಲಾರದಾಗಿದಅಕ್ಕಮಹಾದೇವಿಯ ಇತರ ಶರಣರಿಗಿಂತ ತನ್ನದೇ ಆದ ವಿಶಿಷ್ಟ ಸ್ವರೂಪದ ವ್ಯಕ್ತಿತ್ವವಾಕಾಣುವಲ್ಲಿ ಆಕೆ ಏಕಾಂಗಿಯಾಗಿ ನಿಜವಾಗಿ ಧೀರಳಾದ ಹೆಣ್ಣುಮಗಳು ಲೋಕದಿಂದ ಅಪರೂಪದ ತೊಂದರೆಗಳು ಬಂದರೂ ತಲೆಕೆಡಿಸಿಕೊಳ್ಳದೇ ತನ್ನ ಗುರಿಯತ್ತ ದಿಟ್ಟ ಹೆಜ್ಜೆಯಿಟ್ಟು ನಡೆದವಳಾಗಿದ್ದಾಳೆ.

ಹನ್ನೆರಡನೇ ಶತಮಾನದ ಸಮಾಜ ವ್ಯವಸ್ಥೆಯಲ್ಲಿ ಮತ್ತು ರಾಜತ್ವದ ಕದಂಬ ಭಾವುಗಳಿಂದ ಹೊರಬರುವ ಪ್ರಯತ್ನ ಸಾಮಾನ್ಯವಾದ ಸಂಗತಿಯಾದದ್ದಲ್ಲ. ಇದು ಆಕೆಯ ಧೈರ್ಯ ಮತ್ತು ನಿಜವಾದ ಆಧ್ಯಾತ್ಮ ಸಾಧಕರಿಗೆ ಇರುವ ದಾರ್ಷತೆ. ಆಕೆಯ ವ್ಯಕ್ತಿತ್ವದ ವೈಶಿಷ್ಟವಾಗಿದೆ.

ಅಕ್ಕಮಹಾದೇವಿಯ ಮೇಲೆ ನಡೆದಿರುವ ಅನೇಕ ಅಧ್ಯಯನದಲ್ಲಿ ಆಕೆಯ ದೈವ ದಿಗಂಬರಳಾಗಿ ಅಥವಾ ಬೆತ್ತಲೆಯಾಗಿ ಹೊರಬಂದು ತನ್ನ ಸಾಧನೆಯ ಗುರಿತ್ತ ಸಾಗುತ್ತಾಳೆ ಎಂದು ಕಂಡುಬರುತ್ತದೆ. ಅಂದರೆ ಅಕ್ಕ ಬಟ್ಟೆಯ ಅರಿವನ್ನು ತೋರೆದು ತನ್ನ ಕೇಶರಾಶಿಯಿಂದಲೇ ತನ್ನ ದೇಹವನ್ನು ಮುಚ್ಚಿಕೊಂಡು ಸಂಚರಿಸಿದಳು ಎಂಬಂತವುಗಳು ಅತಿಶಯವಾಗಿ ನಮಗೆ ತೋರದೇ ಇರದು. ಸುಮಾರು ಎಂಟನೂರು ವರ್ಷಗಳಷ್ಟು ಹಿಂದಿನ ಆ ಪರಿಸರದಲ್ಲಿ ಅಕ್ಕ ಬೆತ್ತಲೆಯಾಗಿ ಕೂದಲಿನಿಂದ ತನ್ನ ದೇಹವನ್ನು ಮರೆಮಾಡಿಕೊಂಡು ಸಂಚರಿಸಿದಳು ಎಂದರೆ ಅಸಂಗತ ಹಾಗೂ ಅನುಚಿತವೂ ಆದ ತಪ್ಪು ಕಲ್ಪನೆಯಾಗಿದೆ. ಈ ಹಿನ್ನೆಲೆಯಲ್ಲಿ ದಿವಂಗತ ಶ್ರೀ ಎಚ್. ದೇವೀರಪ್ಪನವರು ಬರೆದ "ಕೇಶಾಂಬರೆಯೆ ದಿಗಂಬರೆಯೆ" ಎಂಬ ಸಂಶೋಧನಾ ಬರಹವೊಂದನ್ನುಗಮನಿಸಬಹುದು.

ಅಕ್ಕಮಹಾದೇವಿಯು ಕೌಶಿಕನ ಅರಮನೆಯನ್ನು "ಕೇಶಾಂಬರೆಯಾಗಿ ತಿರುಗಿ ಬಂದು ಪರ್ವತಾಭಿಮುಖವಾಗಿ ನಡೆತಂದಳ" ಎಂಬ ಹರಿಹರನಲ್ಲಿ ಒಂದು ವರ್ಣನೆಯಿದೆಯಷ್ಟೆ. ಆಕೆ ಕೌಶಿಕನನ್ನು ತಿರಸ್ಕರಿಸಿದಾಗ ಆಕೆ ಕೇಶಾಂಬರಿಯಾಗಿ "ತಿರುಗಿಬಂದು" "ಚನ್ನಮಲ್ಲಿಕಾರ್ಜುನನಂ ಕಂಸ್ಪಲವೇಳ್ ಬಿಜಯಂಗೈಯ್ದಿಕೊಂಡು" ಪುರವನ್ನು ಬಿಟ್ಟು ಹೊರಟಳೆಂದು. ಎಂಬುದು ಇಲ್ಲಿನ ಉಲ್ಲೇಖವಾಗಿದೆ. "ಕೇಶಾಂಬರ" ಎಂಬ ಪದಕ್ಕೆ ಕೇಶದಿಂದ ಮಾಡಿದ ಬಟ್ಟೆಯನ್ನು ಧರಿಸಿದವಳು ಎಂದು ಅರ್ಥ ಮಾಡಬೇಕಾಗುತ್ತದೆ ಎನ್ನುತ್ತಾರೆ ಎಚ್. ದೇವೀರಪ್ಪನವರು. ಇದೇ ರೀತಿಯ ಹರಿಹರನ ಅಕ್ಕಮಹಾದೇವಿಯ ರಗಳೆಯಲ್ಲೂ ಇನ್ನೂ ಒಂದೆರಡು ಕಡೆ ಇರುವ ಉಲ್ಲೇಖಗಳನ್ನು ಗುರುತಿಸಿಕೊಂಡು 'ಕೇಶಾಂಬರ' ಎಂದರೆ ಉಣ್ಣೆಯ ನೂಲಿನಿಂದ ಮಾಡಿದ ಬಟ್ಟೆ ಅಥವಾ ಗೊಂಗಡಿ ಅಥವಾ ಕರಿಯ ಕಂಬಳಿಯ ನಿಲುವಂಗಿ ಎಂದು ಅರ್ಥವೇ ಹೊರತು ಕೂದಲನ್ನು ಮರೆಮಾಚಿಕೊಂಡಿರುವ ಸ್ಥಿತಿ ಎಂದು ಅರ್ಥವಾಗುವುದಿಲ್ಲವೆಂದು ದೇವೀರಪ್ಪನವರು ಹೇಳುತ್ತಾರೆ. ಈ ರೀತಿಯ ದೇವೀರಪ್ಪನವರ ವ್ಯಾಖ್ಯಾನವು ತರ್ಕಬದ್ಧವಾಗಿದೆ ಎಂದು ನಮಗೆ ಕಾಣದೇ ಇರದು.

ಅಕ್ಕ ಮಹಾದೇವಿಯು ಶರಣ ಚಳುವಳಿಯಲ್ಲಿ ಸಕ್ರೀಯವಾಗಿ ಪಾಲ್ಗೊಳ್ಳುವ ಮೂಲಕ ಅನೇಕ ಮಹಿಳಾ ವಚನಕಾರರಿಗೆ ಶಿವಶರಣೆಯರಿಗೆ ಸ್ಫೂರ್ತಿದಾಯಕ ಹಾಗೂ ಮಾರ್ಗದರ್ಶಕಳಾಗಿಯೂ ಇದ್ದಾಳೆ. ಅಕ್ಕ ತನ್ನ ಆಧ್ಯಾತ್ಮಕ ಸಾಧನೆಯ ಹಂಬಲದಿಂದ ಮಹತ್ವ ಪೂರ್ಣವಾದ ವಚನಗಳನ್ನು ಹಾಗೂ ತ್ರಿಪದಿಯನ್ನು ಬರೆದು ಕನ್ನಡದ ಮೊದಲ ಕವಯತ್ರಿಯಾಗಿದ್ದಾಳೆ. ಮಗುವಾಗಿದ್ದಾಗ ತಂದೆ-ತಾಯಿಯರ ಯೌವ್ವನದಲ್ಲಿ ಗಂಡನ ಮುಪ್ಪಿನಲ್ಲಿ ಮಕ್ಕಳ ರಕ್ಷಣೆ, ಆಶ್ರಯದಲ್ಲಿ ಇರಬೇಕಾದ ಹೆಣ್ಣು ಸ್ವಾತಂತ್ರ್ಯಕ್ಕೆ ಅರ್ಹಳಲ್ಲ. ಆಧ್ಯಾತ್ಮಕಿಯಾದವಳಿಗೆ

ಸಾಮಾಜಿಕ ಹೋರಾಟಗಳಿಗೆ ಅರ್ಹಳಲ್ಲ ಎಂಬ ಸಾಮಾಜಿಕ ಪದ್ಧತಿಗಳನ್ನು ಮೆಟ್ಟಿನಿಂತು ಹೆಣ್ಣಿಗೆ ಇದರಿಂದಾಚೆಗೆ ಬೇರೊಂದು ಜೀವನ ಉಂಟೆಂಬುದನ್ನು ತನ್ನ ವೈಚಾರಿಕತೆ ಹಾಗೂ ತನ್ನ ನಡೆ-ನುಡಿಗಳಿಂದ ತೋರಿಸಿದ ಅಕ್ಕಮಹಾದೇವಿ ಹನ್ನೆರಡನೇ ಶತಮಾನದ ಶರಣ ಆಂದೋಲನದಲ್ಲಿ ಒಂದು ಭಿನ್ನವೂ ವಿಶಿಷ್ಟತೆಯೂ ಆದ ವ್ಯಕ್ತಿತ್ವ ಅಕ್ಕನದಾಗಿದೆ.

## ಅಂಬಿಗರ ಚೌಡಯ್ಯ

ಹನ್ನೆರಡನೇ ಶತಮಾನ ಒಂದು ವಿಶಿಷ್ಟತೆಯನ್ನು ಒಳಗೊಂಡಂತಹ ಯುಗವಾಗಿದೆ. ಜನಸಾಮಾನ್ಯರ ಬದುಕು ಬದಲಾವಣೆಯ ದಿಕ್ಕನ್ನು ಕಂಡಂತಹ ಕಾಲವಾಗಿದೆ. ಈ ಎಲ್ಲಾ ಕಾರಣಗಳಿಗೆ ಕಾರಣವಾದ ಅಂಶ ಬಸವಣ್ಣನ ನೇತ್ರತ್ವದಲ್ಲಿ ನಡೆದ ಶರಣ ಚಳುವಳಿ ವಚನ ಆಂದೋಲನಕ್ಕೆ ಕಾರಣವಾಗಿದೆ. ಇಂತಹ ಶರಣ ಕ್ರಾಂತಿ, ಸಾಮಾಜಿಕ ಬದಲಾವಣೆ, ಸಮಾನತೆಯ ಆಂದೋಲನ, ಆಧ್ಯಾತ್ಮಿಕ ಜಾಗೃತಿಯಂಥ ಕಾರ್ಯಗಳು ಹಿಂದೆಂದೂ ಜರುಗದ ದಾಖಲಾತಿ ಭಾರತ ಇತಿಹಾಸದ ಪುಟಗಳಲ್ಲಿಲ್ಲ.

ಸನಾತನ ಕಾಲದಿಂದ ಒಂದು ಪದ್ಧತಿಯನ್ನು ರೂಢಿಸಂಪ್ರದಾಯವನ್ನು ಮಾಡಿಕೊಂಡು ಬಂದಿದ್ದ ಸಮಾಜವನ್ನು ಇದರಲ್ಲಿದ್ದ ವರ್ಣಾಶ್ರಮ ಪದ್ಧತಿಯ ವಿರುದ್ಧ ಎದ್ದುನಿಂತು ಮಾನವೀತ ಮೌಲ್ಯಗಳೊಂದಿಗೆ ಮನುಷ್ಯ ಸಂಬಂಧಗಳನ್ನು ಗೌರವಿಸಿ ಬದಲಾವಣೆಗೆ ಮೂಲವಾದದ್ದು ಈ ಚಳುವಳಿ ಅಥವಾ ವಚನ ಚಳುವಳಿಗೆ ಹಾರುವ ಮೊದಲು ಅಂತ್ಯದ ಕಡೆಯಾಗಿ ಎಲ್ಲರನ್ನೂ ಒಂದೆ ಎಂದು ಕಾಣುವ ಬಸವಾದಿ ಶರಣ ಈ ಚಳುವಳಿ ತನ್ನ ಹೊಟ್ಟೆಯಲ್ಲಿ ಅನೇಕ ಗೊಂದಲ, ವೈರುಧ್ಯ ವಿಶಿಷ್ಟವಾದ ವಿಭಿನ್ನವಾದ ಅನೇಕ ವಿಚಾರಗಳನ್ನೊಳಗೊಂಡಿದ್ದರು ಪ್ರತಿಯೊಬ್ಬ ಶರಣರ ಆಶಯವುಒಂದಷ್ಟು ವಿಭಿನ್ನ ನೆಲೆಯನ್ನು ಹೊಂದಿದಂತವುಗಳಾದರೂ ಕೆಲವು ಶರಣರು ಬಸವಣ್ಣ ಹಾಗೂ ಇತರ ಶರಣರ ಆಸೆ ಎಂಬಂತೆ ನಡೆದರು. ಕೆಲವು ಶರಣರು ತಮ್ಮದೇ ಆದ ವೈಶಿಷ್ಟ್ಯ ಪೂರ್ಣ ನಿಲುವು ತಾತ್ವಿಕ ಚಿಂತನಗೆ ಹೆಸರಾಗಿದ್ದಾರೆ. ಅಂತವರಲ್ಲಿ ಅಕ್ಕ, ಚನ್ನಬಸವಣ್ಣ, ಅಲ್ಲಮಪ್ರಭು, ಸಿದ್ಧರಾಮ, ಬಸವಣ್ಣ, ಮುಕ್ತಾಯಕ್ಕ, ಮುಂತಾದ ಶರಣರು ಈ ವಿಶಿಷ್ಟ ವ್ಯಕ್ತಿತ್ವವನ್ನು ಹೊಂದಿರುವಂತಹ ಸಾಲಿನಲ್ಲಿ ನಿಲ್ಲುತ್ತಾರೆ. ಇಂತವರಲ್ಲಿ ನಿಜಶರಣ ಅಂಬಿಗರ ಚೌಡಯ್ಯನು ಒಬ್ಬ ಪ್ರಮುಖವಾದ ವಚನಕಾರನಾಗಿದ್ದಾನೆ. ಜೊತೆಗೆ ತನ್ನದೇ ಆದ ತಾತ್ವಿಕ ಚಿಂತನೆಯಿಂದ, ಕಾಯಕ ನಿಷ್ಠೆಯಿಂದ ತನ್ನ ಆಶಯವನ್ನು ಇತರ ಆಶಯಕ್ಕೆ ಸಮನ್ವಯತೆಯಿಂದ ಕಂಡರು ತನ್ನದೆ ಆದ ಸ್ಪಷ್ಟ ನಿಲುವಿನಿಂದ ಸ್ವಂತ ಆಶಯದಲ್ಲಿ ಚಿಂತನೆಯನ್ನು ಮಾಡುವ ಲೋಕನೀತಿಯನ್ನು ಹಾಗೂ ಸಮಾಜವನ್ನು ವಿಭಿನ್ನ ದೃಷ್ಟಿಕೋನದಿಂದ ನೋಡುವ ಹಾಗೂ ಇತರರ ವ್ಯಕ್ತಿತ್ವವನ್ನು ಸೂಕ್ಷ್ಮವಾಗಿ ಗ್ರಹಿಸುವ ಸಂವೇದನಾತ್ಮಕ ದೃಷ್ಟಿ ಅಂಬಿಗರ ಚೌಡಯ್ಯನದಾಗಿದೆ. ಚೌಡಯ್ಯ ವಚನಕಾರರಲ್ಲೇ ವಿಭಿನ್ನ, ವಿಶಿಷ್ಟ ವ್ಯಕ್ತಿತ್ವವನ್ನು ಹೊಂದಿವನಾಗಿದ್ದಾನೆ.

ಕೆಳವರ್ಗದ ವಚನಕಾರರಲ್ಲಿ ಅಂಬಿಗರ ಚೌಡಯ್ಯ ಒಬ್ಬ. ತಾವು ಮಾಡುತ್ತಿದ್ದ ಕಾಯಕವನ್ನೇ ತಮ್ಮ ಅಭಿವ್ಯಕ್ತಿಗೆ ಮಾಧ್ಯಮವಾಗಿಗಿರಿಸಿಕೊಂಡಿರುವುದು ಕೆಳವರ್ಗದ ವಚನಕಾರರ ಒಂದು ವಿಶೇಷವಾಸ ಅಂಶವಾಗಿದೆ. ಈ ಅಭಿವ್ಯಕ್ತಿಯು ಆಚರಣೆಯ ಮೂಲಕ, ಕಾಯಕದ ಮೂಲಕ ಅಂದರೆ ಬಸವಣ್ಣವರು ಸಾರಿದ 'ಕಾಯಕವೇ ಕೈಲಾಸ' ಎಂಬ ತತ್ವದಲ್ಲಿ ಜೀವನ ಹುದುಗಿರಿಸಿ ಅದನ್ನೇ ತಮ್ಮ ಬಾಳಾಗಿಸಿತೋರಿಸಿವುದರ ಮೂಲಕ ಹೀಗೆ ಬದುಕಿದ್ದರಿಂದ ಅವರ ನಿರ್ಮಲ ಭಕ್ತಿ ಎಲೆಮರೆಯಕಾಯಿಯಂತೆ ಗುಪ್ತವಾಗಿದ್ದುದೆ ಹೆಚ್ಚು. ತಮ್ಮ ಶ್ರದ್ದೇ, ಭಕ್ತಿ, ಪ್ರಾಮಾಣಿಕತೆಯಿಂದ ಅಂತರಂಗ ಹಾಗೂ ಬಹಿರಂಗವನ್ನು ಶುದ್ಧವಾಗಿಟ್ಟುಕೊಂಡು

ತಮ್ಮ ವ್ಯಕ್ತಿತ್ವ ವಿಕಸನ ಮಾಡಿಕೊಳ್ಳುತ್ತಿದ್ದರು ಇದರಲ್ಲಿ ಅವರ ಕಾಯಕದ ಪಾತ್ರ ಹಿರಿದಾದುದಾಗಿದೆ. ಕಾಯಕ ಯಾವುದಾದರೂ ಸರಿ ಅದು ಮಾನವ ಕಲ್ಯಾಣಕ್ಕೆ ಸಾಧಕವಾದದ್ದು ಶ್ರದ್ಧೆ, ಭಕ್ತಿ, ಪ್ರಮಾಣಿಕತೆಗಳನ್ನು ಒಳಗೊಂಡಿರಬೇಕಾದ್ದು ಆಗಿರಬೇಕು. ಇದರಿಂದಾಗಿ ಕಾಯಕದಿಂದ ಬದುಕುವರ ವ್ಯಕ್ತತ್ವದ ಹಿರಿಮೆ ಗರಿಮೆಗಳು ಮೆರೆಯುತ್ತಿದ್ದವು. ಮೊದಲಿನ ಕಾಲಘಟ್ಟದಲ್ಲಿದ್ದ ಭಕ್ತರು ಭಕ್ತಿಯಿಂದ ಮೆರೆದರೆ ವಚನಾಕಾರರು ಕಾಯಕದಿಂದ ಭಕ್ತಿಯನ್ನು ಬೆಳಗಿಸಿದದು ವಿಶಿಷ್ಟವಾದುದಾಗಿದೆ ಎಂದೇ ಹೇಳಬಹುದು.

ಶರಣರಲ್ಲಿ ಕೆಲವರು ಮಾಡಿರುವ ವಚನ ರಚನೆಗಳು. ಕಾಯಕದ ಪರಿಭಾಷೆಗಳನ್ನು ಬಳಸಿಕೊಂಡು ಕಾಯಕದ ವಿಧಿವಿಧಾನಗಳನ್ನು ವಿವರಿಸುತ್ತ, ಆಧ್ಯಾತ್ಮ ಚಿಂತನೆಯ ಭಾವವನ್ನು ಅಭಿವ್ಯಕ್ತಪಡಿಸುತ್ತಿದ್ದರು. ಕಾಯಕವನ್ನು ಪೂಜೆಯಾಗಿಸಿಕೊಂಡಿರುವ ಕಾಯಕಕ್ಕೆ ಗೌರವ ಭಾವ ಪ್ರಧಾನವಾಗಿ ಕಾಣುತ್ತದೆಯೇ ಹೊರತು ಕಾಯಕದಿಂದ ಆಚೆಗೆ ಹೋದಂತೆ ಆ ಚಿಂತನೆ ಉಳಿಯುವುದಿಲ್ಲ. ಹೀಗಾಗಿ ಅವರ ಅಭಿವ್ಯಕ್ತಿ ಜನಪರವಾದುದು. ಸಮಾಜದ ನೆಲೆಯದ್ದು. ಈ ಅಭಿವ್ಯಕ್ತಿ ವಿಧಾನ ವಿಶಿಷ್ಟವಾದುದು. ಅಂಬಿಗರ ಚೌಡಯ್ಯ ಇಂತಹ ಅಭಿವ್ಯಕ್ತಿ ಪರಂಪರೆಯನ್ನು ಬೆಳೆಸಿದ ಶರಣರಲ್ಲಿ ಒಬ್ಬ. ದೋಣಿ ನಡೆಸುವ ತನ್ನ ಕುಲಕಸುಬನ್ನು ಮುಂದುವರಿಸುತ್ತಿದ್ದ ಈತ ಬಸವಣ್ಣನವರ ನೇತೃತ್ವದ ವೀರಶೈವ ಧರ್ಮದ ಅನುಯಾಯಿಯಾಗಿದ್ದನು. ನೇರನುಡಿಯ ನಿಷ್ಠುರವಾದಿ, ಕಾಯಕ ನಿಷ್ಠೆ, ಪ್ರಮಾಣಿಕತೆಯ ವ್ಯಕ್ತಿತ್ವ ಹೊಂದಿದವನಾಗಿದ್ದನು. ಈತನ ವಚನಗಳು ಸಿದ್ಧಾಂತ ರೂಪದ ಹೇಳಿಕೆಯಾಗದೇ, ಸಿಟ್ಟು, ಆಕ್ರೋಷ ಭರಿತ ಬಂಡಾಯದ ಧ್ವನಿಯಾಗಿದೆ. ಅಲ್ಲದೆ ಖಂಡನೆ, ತಿರಸ್ಕಾರ, ಆತ್ಮ ವಿಮರ್ಶಎಯ ಪ್ರತೀಕವಾಗಿ ಚೌಡಯ್ಯನ ವಚನಗಳು ಆತ್ಮಾಭಿಮಾನದಿಂದ ಹೊರಹೊಮ್ಮಿವೆ.

ಸನಾತನ ವಾದಿಗಳ ಸಂಪ್ರದಾಯ ಮತ್ತು ಅಂದಿನ ವರ್ಣಾಶ್ರಮ ಪದ್ಧತಿಯಲ್ಲಿ ಕೇಳಸ್ತರದ ಜನರ ಮೇಲೆ ನಡೆಯುತ್ತಿದ್ದ ಶೋಷಣೆಗಳನ್ನು, ನೋವನ್ನು ಅನುಭವಿಸಿದಂತ ವರ್ಗಕ್ಕೆ ಸೇರಿದವನಾದ್ದರಿಂದ ಅಂದಿನ ಸಮಾಜವು ಈತನನ್ನು ಕಾಯಕದ ಅಥವಾ ವೃತ್ತಿಯನ್ನು ಮೂಲವಾಗಿಟ್ಟು ಹಂಗಿಸಿ, ತಾತ್ಸರದ ನುಡಿಗಳನ್ನು ಆಡಿರಬೇಕು. ಆದ್ದರಿಂದಲೇ ಈತ ತನ್ನ ಕಾಯಕದ ಶ್ರೇಷ್ಠತೆ ಮೆರೆಯುವುದರ ಜೊತೆಗೆ ಸಮಾಜದ ಯಾವ ಕಾಯಕವು ಕನಿಷ್ಠವಾದುದಲ್ಲ ಎಂಬ ನಿರ್ಧಾರಕ್ಕೆ ಬರುವುದಲ್ಲದೆತನ್ನ ಆತ್ಮಾಭಿಮಾನವನ್ನು ಇಮ್ಮಡಿಗೊಳಿಸಿಕೊಂಡು ಹೇಳುತ್ತಾನೆ.

“ಅಂಬಿಗ ಅಂಬಿಗ ಎಂದು ಕುಂದು ನುಡಿಯದಿರು
ನಂಬಿದರೆ ಒಂದೇ ಹುಟ್ಟಲಿ ಕಡೆಯ
ಹಾಯಿಸುವನಂಬಿಗರ ಚೌಡಯ್ಯ”

ಚೌಡಯ್ಯ ಹೀಗೆ ಆತ್ಮಾಭಿಮಾನದಿಂದ ಲೋಕದ ಕುಹಕ ಜನರ ಮಾತಿಗೆ ಸ್ಪಷ್ಟ, ದಿಟ್ಟ ಉತ್ತರವನ್ನು ಈ ರೀತಿಯಲ್ಲಿ ಧೈರ್ಯದಿಂದ ನೀಡುತ್ತಾನೆ. ಇದು ಆತನ ಅಹಂಕಾರದ, ಆತ್ಮಪ್ರತಿಷ್ಠೆಯ ಮಾತಿನಂತಾಗಿದೆ. ತನ್ನ ಹೆಗ್ಗಳಿಕೆಯ ಅಭಿಮಾನದ ಧ್ವನಿಯಾಗಿದೆ. ಅಂದಿನ ಸಮಾಜದ ಇತರರು ಈತನನ್ನು ವ್ಯಂಗ್ಯ ಮಾಡಿದರೆ ಈತ ಸುಮ್ಮನೆ ಕುಳಿತು ಕೇಳುವಂತವನಲ್ಲ.

ಅತ್ಯಾಭಿಮಾನದಿಂದ ಇದು ಒಂದು ಸವಾಲು ಎಂಬ ರೀತಿಯಲ್ಲಿ ವ್ಯಕ್ತಿತ್ವದ ಉನ್ನತಿಯನ್ನು ಕಾಯಕದಲ್ಲಿರುವ ತನ್ನ ಪರಿಣಿತಿಯನ್ನು ಈ ಮಾತುಗಳಲ್ಲಿ ಬಿಂಬಿಸುತ್ತಾನೆ. ಜೊತೆಗೆ ಆತನ ಆತ್ಮವಿಶ್ವಾಸದ ಅದಮ್ಯ ಶಕ್ತಿಯನ್ನು ನಾವು ಈ ವಚನದಲ್ಲಿ ಕಾಣಬಹುದಾಗಿದೆ.

"ತಡಿನೆಲೆಯಿಲ್ಲದ ಮಹಾನದಿಯಲ್ಲಿ
ಒಡಲಿಲ್ಲದ ಅಂಬಿಗ ಬಂದಿದ್ದಾನೆ
ಹಿಡಿವ ಬಿಡುವ ಮನವ ಬೆಲೆಗೊಟ್ಟಡ
ಕಡೆಗಾಣಿಸಿ ಹಾಯಿಸುವೆ ಹೊಳೆಯನು
ನುಡಿಯಿಲ್ಲದ ನಿಸ್ಸೀಮ ಗ್ರಾಮದಲ್ಲಿರಿಸುವೆನೆಂದಾತನಂಬಿಗ ಚೌಡಯ್ಯ"

ಈ ವಚನದಲ್ಲಿ ಕಂಡುಬರುವುದು ಚೌಡಯ್ಯನವರ ಪ್ರತಿಷ್ಠೆ ಅಲ್ಲ ಅಥವಾ ಅಹಂಕಾರವಲ್ಲ. ಒಬ್ಬ ಬಂಡಾಯದ ಧ್ವನಿಯಲ್ಲಿ ಮಾತನಾಡುವವನು ಬದಲಾವಣೆಯನ್ನು ನಿರೀಕ್ಷಿಸುವಲ್ಲಿ ಆವೇಶಭರಿತವಾಗಿ ಅಥವಾ ತಾನು ಇಟ್ಟಿರುವ ನಂಬಿಕೆಯಿಂದ, ಆತ್ಮವಿಶ್ವಾಸದಿಂದ ತನ್ನ ತಾನರಿತುಕೊಂಡು ಪರಿಪಕ್ವಗೊಂಡ ಭಾವದಿಂದ ಮಾತನಾಡುವ ಬಗೆ ಇದು.

"ಕಂಗಳ ನಾಮ ಹರುಗುಲವಾಗಿ
ನೋಡುವ ದೃಷ್ಟಿ ಅಂಬಿಗನಾಗಿ
ಕರಣೆಂದ್ರೀಯವೆಂಬ ಬಹುಜನಂಗಳು ಕೂಡಿ
ಆಸೆಯೆಂಬ ಹೊಳೆಯ ದಾಟುವುದಕ್ಕೆ ಹುಟ್ಟು ಕಾಣದೆ
ಹರಗುಲು ಇಚೆ ಉಳಿಯುತ್ತೆಂದನಂಬಿಗ ಚೌಡಯ್ಯ"

ಈ ವಚನದಲ್ಲಿ ಕಾಯಕದ ವಿವರಣೆಗಳನ್ನು ಬದುಕಿನೊಡನೆ ತಿರುಗಿಸುವ ಚಿಂತನೆಗೆ ಸೇರಿಕೊಂಡಿರುವ ವಿಶಿಷ್ಟ ಸ್ವರೂಪದ್ದಾಗಿದೆ. ಇದು ಆಸೆಯ ಆವೇಶದಲ್ಲಿ ಇರುವ ಜನರನ್ನು ಕುರಿತು ಆಡಿರುವ ಮಾತಾಗಿದೆ. ಆತ್ಮಾಭಿಮಾನದ ಪ್ರತಿಕದಂತೆ ಕಾಣುತ್ತವೆ. ಚೌಡಯ್ಯನು ಮೂಲತಃ ಕೆಳವರ್ಗದ ವಚನಕಾರನಾಗಿದ್ದರಿಂದ ಇವನಿಗೆ ಆತ್ಮವಿಮರ್ಶೆಮಾಡಿಕೊಳ್ಳುವಂತಹ ಪ್ರಮೇಯ ಅತೀ ಕಡಿಮೆಯಾಗಿ ಕಾಣುತ್ತದೆ.

ಬಸವಣ್ಣನವರು ತಮ್ಮ ಮನಸ್ಸು ಅರಿದ ರೀತಿಯನ್ನು ನಾಯಿ, ನರಿ ಮುಂತಾದ ಹಲವು ಪ್ರಾಣಿಪಕ್ಷಿ, ಕ್ರಿಮಿಕೀಟಗಳಿಗೆ, ಹಣ್ಣುಕಾಯಿಗಳಿಗೆ ಹೋಲಿಸಿಕೊಂಡು ತಮ್ಮ ಆತ್ಮವಿಮರ್ಶೆಯನ್ನು ಮಾಡಿಕೊಳ್ಳುತ್ತಾರೆ. ಕಾರಣ ಅವನು ಮೇಲ್ಜಾತಿಯಲ್ಲಿ ಹುಟ್ಟಿ ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿಯಾಗಿಟ್ಟು ಚಳುವಳಿಯ ನಾಯಕವಾಗಿ ಬಸವಣ್ಣ ತನ್ನನ್ನು ಮೇಲಿರಿಮೆ, ಹುಸಿಭಾವ ಕಾಡದಿರಲೆಂದು ಅಥವಾ ಇಂಥ ಪ್ರಸಂಗ ಎದುರಾದಾಗ ಬಸವಣ್ಣನಂತವರು ಆತ್ಮ ಪ್ರತ್ಯೇಯ ಮಾಡಿಕೊಳ್ಳುತ್ತಾರೆ. ಆದರೆ ಚೌಡಯ್ಯನಂತ ಕೆಳಸ್ತರದ ವಚನಕಾರರು ಸಮಾಜದಲ್ಲಿ ಇದ್ದ ಅಂಧಕಾರಕ್ಕೆ ಬಲಿಯಾಗಿ ಶೋಷಣೆಗೆ ಒಳಗಾಗಿ ತಮ್ಮತನವನ್ನೇ

ಕಳೆದುಕೊಂಡು ಈ ವ್ಯವಸ್ಥೆಯ ವಿರುದ್ಧ ತಿರುಗಿ ಬೀಳಲು ಆಕ್ರೋಶ, ಸಿಟ್ಟು, ಸೇಡವುಗಳು ತುಂಬಿ ಒಳ್ಳೆಯ ಕಾಲಕ್ಕೆ ಕಾಯುತ್ತಿದ್ದಾಗ ಈ ಸಂದರ್ಭ ಬಂದೊದಗಿದ್ದರಿಂದ ಅವರಲ್ಲಿದ್ದ ಆತ್ಮಾಭಿಮಾನವು ಅವರು ಅನುಭವಿಸಿದ ಅನಮಾನ, ಹಸಿವು ಅದೋಗತಿಯ ಪರಿಸ್ಥಿತಿಯಿಂದ ಬಂದ ಯಾವ ಕೆಳಜಾತಿಯ ವಚನಕಾರನೂ ಬಸವಣ್ಣನ ರೀತಿ ಆತ್ಮಪ್ರತ್ಯೇಯ, ಆತ್ಮವಿಮರ್ಶೆ ಅವರಿಗೆ ಅಷ್ಟು ಅನಿವಾರ್ಯ ಎಂದು ಅನಿಸಿಲ್ಲ ಎಂದೇ ಕಾಣುತ್ತದೆ. ಅಂತವರಲ್ಲಿ ಅಂಬಿಗರ ಚೌಡಯ್ಯನದು ಇದೇ ಸ್ಥಿತಿ. ಇವನ ಅನೇಕ ವಚನಗಳಲ್ಲಿ ಸಿಟ್ಟು ಆಕ್ರೋಶ ನಿಷ್ಠುರವಾದ ಮಾತುಗಳು ಸಮಾಜದ ಒಡಲಾಳದಲ್ಲಿ ಅಡಗಿದ್ದ ಶೋಷಣೆ, ದೌರ್ಜನ್ಯ ಇತ್ಯಾದಿ ಕೀಳರಿಮೆ ಭಾವನೆ, ಅಸಮಾನತೆ ಮುಂತಾದ ನೋವುಗಳನ್ನು ಅನುಭವಿಸಿದ್ದರಿಂದ ಸಹಜವಾಗಿ ಮೂಡಿ ಬಂದದ್ದರ ಜೊತೆಗೆ ಆತ್ಮಾಭಿಮಾನದ ಪ್ರತೀಕವೆಂಬಂತೆ ನೈತಿಕ ನಿಷ್ಠುರತೆ, ಸಮಾಜ ವಿಮರ್ಶೆ ಪ್ರಕಟಗೊಂಡಿದೆ.

"ಕುರಿ, ಕೋಳಿ, ಕಿರುಮೀನ ತಿಂಬವರ
ಊರೊಳಗೆ ಇರು ಎಂಬರು
ಅಮೃತಾನ್ನವ ಕರೆವಗೋವ ತಿಂಬವರ
ಊರಿಂದ ಹೊರಗಿರು ಎಂಬರು
ಆ ತನು ಅರಿಗೋಲಾಯಿತ್ತು
ಬೊಕ್ಕನ ಸಿದಿಕೆ ಬಾರುಕೋಲು ಪಾದರಕ್ಷೆ
ದೇವರ ಮುಂದೆ ಬಾರಿಸಲಿಕ್ಕೆ ಮದ್ದಳೆಯಾಯಿತ್ತು
ಈ ಬುದ್ದಲಿಕಯೊಳಗನ ತುಪ್ಪವ ಶುದ್ಧಮಾಡಿ
ತಿಂಬ ಗುಜ್ಜ–ಹೊಲೆಯರ ಕಂಡಡೆ
ಉದ್ದನ ಚಮ್ಮಾಳಿಗೆಯ ತಕ್ಕೊಂಡು
ಬಾಯ ಕೊಲ್ಲುವೆನು ಎಂದಾತ ನಮ್ಮ ಅಂಬಿಗರ ಚೌಡಯ್ಯ

ಚೌಡಯ್ಯನು ಮೇಲ್ವರ್ಗದ ಜನರಿಂದ ಪುರಾತನ ಕಾಲದಿಂದ ನಡೆದುಬರುತ್ತಿದ್ದು ಶೋಷಣೆಯನ್ನು ಅತ್ಯಂತ ಸಮೀಪದಿಂದ ಗಮನಿಸಿದವನು. ಸ್ವತಹ ಅನುಭವಿಸಿದಂತವನಾಗಿದ್ದಾನೆ. ಹಾಗಾಗಿ ಈ ತರದ ಆವೇಶ ಆಕ್ರೋಶ ಭರಿತವಾದ ಮಾತುಗಳು ಹೊರಬರುತ್ತವೆ. ಸನಾತನ ವಾದಿಗಳನ್ನು ಖಂಡಿದವರಲ್ಲಿ ಮುಖ್ಯ ಹೆಸರು ಚೌಡಯ್ಯನದೇ. ಎಲ್ಲಾ ಚವನಕಾರರು ಈ ರೀತಿ ವ್ಯಕ್ತಪಡಿಸಲು ಸಾಧ್ಯವಾಗಿಲ್ಲ. ಆತ್ಮಸ್ಥೈರ್ಯದಿಂದ ಪ್ರತಿಭಟನೆಯನ್ನು ಮಾಡುವ ಬಗೆಯಾಗಿ ಈ ರೀತಿಯಾಗಿ ಪ್ರತಿಕ್ರಯಿಸುತ್ತಾನೆ. ಸಮಾಜದಲ್ಲಿ ನೋವುಂಡ ವರ್ಗದವರಲ್ಲಿ ಅಂಬಿಗರ ಚೌಡಯ್ಯ ವಿಶಿಷ್ಟ ವ್ಯಕ್ತಿಯಾಗಿ ವೈಶಿಷ್ಟ್ಯ ಪೂರ್ಣವಾದ ವ್ಯಕ್ತಿತ್ವವನ್ನು ಹೊಂದಿದ್ದಾನೆ.

## ಕೊನೆ ಟಿಪ್ಪಣಿ


೦೧. ಡಾ. ಎಚ್. ತಿಪ್ಪೇರುದ್ರಸ್ವಾಮಿ (ಸಂ) ಸಿದ್ಧರಾಮನ ವಚನಗಳು, ಡಿ.ವಿ.ಕೆ ಮೂರ್ತಿ ಮೈಸೂರು, ೧೯೭೫

೦೨. ಡಾ.ಅ.ರಾ. ಮಿತ್ರ ಸಿದ್ದರಾಮನ ಉಪಮೆಗಳ ಶ್ರೀ ಸರ್ಪಭೂಷಣಮಠ, ೧೯೯೧

೦೩. ಎಸ್. ವಿದ್ಯಾಶಂಕರ (ಸಂ), ಸಿದ್ಧರಾಮೇಶ್ವರ ವಚನ ಸಂಪುಟದಿಂದ ವಚನಗಳನ್ನು ಬಳಸಲಾಗಿದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೯೩

೦೪. ಡಾ. ಜಿ.ಎಸ್. ಶಿವರುದ್ರಪ್ಪನವರ ಲೇಖನ (ಸಂ) ವಚನಕಾರರು ವ್ಯಕ್ತಿ ಹಾಗೂ ಅಭಿವ್ಯಕ್ತಿ ಶ್ರೀ ಸರ್ಪಭೂಷಣಮಠ, ೧೯೯೩

೦೫. ಡಾ. ಎಲ್. ಬಸವಾರಾಜು, ಅಕ್ಕನ ವಚನಗಳು, ೧೯೭೨ ವಚನ ಸಂಖ್ಯೆ-೧೪೭

೦೬. ಡಾ. ಎಂ.ಎಸ್. ಸುಂಕಾಪುರ (ಸಂ) ಮಾಹಾದೇವಿಯಕ್ಕನ ರಗಳೆ ಹರಿಹರನ ನೂತನ ಪುರಾತನದ ರಗಳೆಗಳು, ಕನ್ನಡ ವಿ.ವಿ ಧಾರವಾಡ

೭. ಡಾ. ಜಿ.ಎಸ್. ಶಿವರುದ್ರಪ್ಪ ಅವರ ಲೇಖನ ವಚನಕಾರರು ವ್ಯಕ್ತಿ ಹಾಗೂ ಅಭಿವ್ಯಕ್ತಿ ಸರ್ಪಭೂಷನಮಠ, ೧೯೯೩

೦೮. ಡಾ. ಎಚ್. ದೇವೀರಪ್ಪ, ಕೇಶಾಂಬರೆಯೇ ದಿಗಂಬರೆಯೇ ಸಂಶೋಧನಾ ಸಂಪುಟ, ೧೯೮೪ ಪುಟ ಸಂಖ್ಯೆ, ೪೮೯-೪೫೨ ಶಿವಕುಮಾರ ಪ್ರಕಾಶನ ಬೆಂಗಳೂರು

# ಅಧ್ಯಾಯ –೪
# ಬಸವಣ್ಣನವರ ವ್ಯಕ್ತಿತ್ವ

ಬಸವಾದಿ ಶರಣರದು ಕನ್ನಡನಾಡಿನಲ್ಲಿ ನಡೆದ ಪ್ರಥಮ ಸಮಾಜೋಧಾರ್ಮಿಕ, ಆರ್ಥಿಕ, ರಾಜಕೀಯ ಚಳುವಳಿಯಾಗಿದೆ, ವಚನಗಳ ಮೂಲಕ, ಅನುಭವಮಂಟಪದ ವಿಚಾರಗೋಷ್ಠಿಗಳ ಮೂಲಕ, ವೈಚಾರಿಕ ಚಿಂತನೆಯ ಮೂಲಕ, ಸಮಾನತೆಯ ಸ್ವಾತಂತ್ರ್ಯತೆಯ ಆಶಯದ ಮೂಲಕ ನಡೆದ ವಿಶಿಷ್ಟ ಬಗೆಯ ಚಳುವಳಿಯಾಗಿದೆ. ಹನ್ನೆರಡನೆಯ ಶತಮಾನದಲ್ಲಿ ನಡೆದ ಈ ಕಲ್ಯಾಣದ ಚಳುವಳಿಯ ನೇತೃತ್ವವನ್ನು ವಹಿಸಿಕೊಂಡ ವ್ಯಕ್ತಿ ಭಕ್ತಿ ಬಂಡಾರಿ ಬಸವಣ್ಣ.

ಬಸವಣ್ಣನವರು ತಮ್ಮ ವ್ಯಕ್ತಿತ್ವವನ್ನು ಉದಾತ್ತೀಕರಿಸಿಕೊಳ್ಳುವುದರ ಜೊತೆಗೆ ತಮ್ಮ ಸುತ್ತ ಮುತ್ತಲಿನ ವಾತಾವರಣವನ್ನು ಉದಾತ್ತೀಕರಿಸಿ ಮಹಾಪುರುಷನಾಗಿದ್ದಾನೆ. ಹಾಗೂ ಈ ಎರಡನ್ನು ಸಾಧನೆಗೈಯುವ ಮೂಲಕ ಯುಗ ಪ್ರವರ್ತಕನಾಗಿದ್ದಾನೆ. ಸಾಮಾನ್ಯವಾಗಿ ಯುಗಪುರುಷರು ಸಾಮಾಜಿಕ, ಧಾರ್ಮಿಕ,ರಾಜಕೀಯ, ಸಾಹಿತ್ಯಿಕ, ಹೀಗೆ ಬದುಕಿನ ಯಾವುದೋ ಒಂದು ಕ್ಷೇತ್ರದಲ್ಲಿ ಸಾಧನೆಗೈದು ಹೊಸ ತಿರುವು ತಂದು ಕೊಡುತ್ತಾರೆ ಆದರೆ ಬಸವಣ್ಣನವರು ಇಂತಹ ಎಲ್ಲಾ ಕ್ಷೇತ್ರಗಳಲ್ಲಿ ಸುಧಾರಣೆ ತರುವ ಕಾರ್ಯಮಾಡಿ ಹೊಸ ಬದಲಾವಣಗೆ ಕಾರಣಕರ್ತನಾಗಿದ್ದಾನೆ. ಆದ್ದರಿಂದ ಆತನನ್ನು ಜಗತ್ತು ಕಂಡ ವಿಶಿಷ್ಟ ಹಾಗೂ ಅಪರೂಪದ ವ್ಯಕ್ತಿ ಎಂದೇ ಕರೆಯಬಹುದು.

ಹನ್ನೆರಡನೆಯ ಶತಮಾನದ ಕರ್ನಾಟಕದಲ್ಲಿ ರಾಜಪ್ರಭುತ್ವವು, ಸನಾತನ ಪರಂಪರೆಯು ಸಮಾಜವನ್ನು ನಿಯಂತ್ರಿಸುವ ಶಕ್ತಿಗಳಾಗಿದ್ದವು. ಮೇಲ್ವರ್ಗದವರ ಪ್ರಭುತ್ವದ ಯೋಗಕ್ಷೇಮಕ್ಕಾಗಿ ಅಂದಿನ ಸಮಾಜದ ಕೆಳಸ್ತರದ ಶೂದ್ರರು, ಪಂಚಮರು, ಹಾಗೂ ಇತರ ಕಳವರ್ಗದ ಜಾತಿಯವರು ದುಡಿಯುವ ಸ್ಥಿತಿಯು ನಿರ್ಮಾಣವಾಗಿತ್ತು. ಅಲ್ಲದೆ ಪ್ರತಿಷ್ಠಿತ ಮೇಲ್ವರ್ಗದ ಜನರ ಆಡಂಬರದ ಆಚರಣೆಗಳು ಪ್ರಾರಂಭವಾಗಿದ್ದುದಲ್ಲದೆ, ಇತರ ಕೆಳಜಾತಿಯ ವರ್ಗದವರಲ್ಲಿ ಅನೇಕ ಕ್ಷುದ್ರದೇವತೆಗಳ, ತಮ್ಮ ಕಾಲ್ಪನಿಕ ಮಾರಯ್ಯಾ, ಧೂಳಯ್ಯಾ ಮುಂತಾದ ದೇವತೆಗಳ ಆರಾಧನೆಗಳು ರೂಢಿಯಾಗಿಬಿಟ್ಟವು. ಸ್ತ್ರೀ –ಪುರುಷರ ನಡುವೆ ಅಸಮಾನತೆ, ಮೇಲುಜಾತಿ–ಕೀಳುಜಾತಿಗಳೆಂಬ ಭೇಧಭಾವ, ಉಳ್ಳವರು–ಇಲ್ಲದವರೆಂಬ ತಾರತಮ್ಯಗಳು

ತಲೆದೋರಿದವು. ಇದರಿಂದ ಒಂದು ಮತ್ತೊಂದನ್ನು ಶೋಷಿಸುವಲ್ಲಿ ಸಮಾಜದ ವ್ಯವಸ್ಥೆಯ ಸಮತೋಲನ ತಪ್ಪಿಹೋಗಿದ್ದಿತು. ಈ ಎಲ್ಲಾ ಅನ್ಯಾಯಗಳ ವಿರುದ್ಧವಾಗಿ ಒಣ ಸಂಪ್ರದಾಯದ ವಿರೋಧಿಯಾಗಿ, ಸಾಮಾಜಿಕ ಸಮಾನತೆಗಾಗಿ ಹೋರಾಟ ಮಾಡಿದವ ಬಸವಣ್ಣ.

ಕನ್ನಡ ಸಾಹಿತ್ಯದಲ್ಲಿ ಬಸವಣ್ಣನವರ ವ್ಯಕ್ತಿತ್ವದ ಮೇಲೆ ಬೆಳಕು ಚೆಲ್ಲುವ ಅನೇಕ ಕಾವ್ಯಗಳು, ಕೃತಿಗಳು, ಪುರಾಣಗಳು ರಚನೆಗೊಂಡಿವೆ. ಹನ್ನೆರಡನೆಯ ಶತಮಾನದಿಂದ ಇಂದಿನ ಕಾಲಘಟ್ಟದವರೆಗೂ , ಕರ್ನಾಟಕದಲ್ಲಿ ಬಸವಣ್ಣನನ್ನು ಕುರಿತು ಹುಟ್ಟಿದಷ್ಟು, ರಚನೆಯಾದಷ್ಟು ಸಾಹಿತ್ಯ ಬೇರೆ ಯಾವ ವ್ಯಕ್ತಿಯ ಮೇಲೂ ರಚನೆಯಾಗಿಲ್ಲ ಎಂದೇ ಹೇಳಬಹುದಾಗಿದೆ. ಇದರಿಂದ ಕರ್ನಾಟದಕ ಜನತೆಯ ಮೇಲೆ ಬೀರಿರುವ ಬಸವಣ್ಣನವರ ವ್ಯಕ್ತಿತ್ವದ ಪ್ರಭಾವವು ನಮಗೆ ತಿಳಿಯುತ್ತದೆ. ಆತನ ವ್ಯಕ್ತಿತ್ವದ ಬೆಳಗನ್ನು ಚೆಲ್ಲುವ ಕೃತಿಗಳ ಜೊತೆಗೆ ಸ್ವತಃ ಬಸವಣ್ಣನ ರಚಿಸಿರುವಂತಹ ವಚನಗಳು ಆತನ ವ್ಯಕ್ತಿತ್ವವನ್ನು ಪರಿಚಯ ಮಾಡಿಕೊಡುವಲ್ಲಿ ಸಹಾಯಕವಾಗಿ ನಿಲ್ಲುತ್ತವೆ. ಈ ವಚನಗಳು ಹಲವು ಆಯಮಗಳನ್ನು ಹೊಂದಿದ್ದು, ಬೇರೆ ಬೇರೆ ದೃಷ್ಟಿಕೋನಗಳಿಂದ ಅಧ್ಯಯನ ಮಾಡಬಹುದಾಗಿದೆ. ಇಲ್ಲಿ ಮುಖ್ಯವಾಗಿ ಬಸವಣ್ಣನವರ ವ್ಯಕ್ತಿತ್ವವನ್ನು ನೋಡಲು ಪ್ರಯತ್ನಿಸಲಾಗಿದೆ.

ಡಾ. ಪಿ.ವಿ.ನಾರಾಯಣರು ಹೇಳುವಂತೆ "ನಮ್ಮ ಮತ್ತು ಬಸವಣ್ಣನವರು ನಡುವೆಯಿರುವುದು ಎಂಟನೂರು ವರ್ಷಗಳಷ್ಟು ದೀರ್ಘವಾದ ಕಾಲದ ಕಂದರ ಆದರೆ ಆ ಕಾಲ ವ್ಯತ್ಯಾಸವನ್ನು ಮೀರಿ ಬಸವಣ್ಣನವರು ನಮ್ಮ ಹೃದಯ-ಬುದ್ದಿಗಳಿಗೆ ಹತ್ತಿರವಾಗುತ್ತಾನೆ. ನಮ್ಮ ಮನಸ್ಸು-ಕಲ್ಪನೆಗಳನ್ನು ಸೂರೆಗೊಳ್ಳುತ್ತಾನೆ. ಇದಕ್ಕೆ ಕಾರಣ ಆತನ ವ್ಯಕ್ತಿತ್ವದ ಮಾರ್ದವ ಮತ್ತು ಆಲೋಚನೆಗಳ ಆಧುನಿಕತೆ ಅವನು ಶ್ರೇಷ್ಠ ವ್ಯಕ್ತಿಗಳಲ್ಲೊಬ್ಬನಾದರೂ ಸಾಮಾನ್ಯರಿಗೂ ಅರ್ಥವಾಗುವುದು, ತನ್ನ ಸರಳತೆ ಮತ್ತು ನೇರವಾದ ನಡೆ-ನುಡಿಗಳಿಂದ ಪ್ರಾಮಾಣಿಕತೆಯಿಂದ ಅವನ ವೈಚಾರಿಕತೆಯು ಯಾವುದೇ ಆಲೋಚನಾ ದೃಷ್ಟಿಯಿಂದಲೂ ಆಧುನಿಕವಾಗಿರುವುದಕ್ಕೆ ಕಾರಣ ಅವನು ವಸ್ತುನಿಷ್ಠವಾಗಿ ನೋಡುವ ದೃಷ್ಟಿ ಸಾಮಾನ್ಯರಿಗೆ ಅವನು ಪೂಜ್ಯನಾಗುವಂತೆಯೇ ಬುದ್ದಿಜೀವಿಗಳಿಗೆ ಶ್ರೇಷ್ಠ ವೈಚಾರಿಕ ವ್ಯಕ್ತಿಯಾಗುತ್ತಾನೆ. ಸಾಹಿತಿಗಳ ದೃಷ್ಟಿಯಲ್ಲಿ ಅತ್ಯಂತ ಮಹತ್ವದ ಕವಿಯಾಗಿರುವಂತೆಯೇ ಇತಿಹಾಸಕಾರರಿಗೆ ಕನ್ನಡನಾಡಿನ ಸಾಂಸ್ಕ್ರತಿಕ-ಧಾರ್ಮಿಕ ಇತಿಹಾಸಕ್ಕೆ ಹೊಸ ತಿರುವನ್ನಿತ್ತ ಪ್ರಮುಖ ವ್ಯಕ್ತಿಯಾಗುತ್ತಾನೆ". ಸುಮಾರು ಎಂಟನೂರು ವರ್ಷಗಳ ಹಿಂದಿನ ಪರಿಸ್ಥಿತಿಯಲ್ಲಿ ,ಎಲ್ಲಾ ಶಿವಶರಣರನ್ನು ಒಂದೆಡೆಗೆ ಕೂಡಿಸುವುದು ಸಾಮಾನ್ಯವಾದ ಸಂಗತಿಯಲ್ಲ ಏಕೆಂದರೆ ಇಂದಿನ ಆಧುನಿಕ ಜಗತ್ತಿನಲ್ಲಿಯೂ, ಸಾಧ್ಯವಾಗದಂತಹ ಕಾರ್ಯ ಅದಾಗಿದೆ. ಮಹಾಮನೆಯನ್ನು ನಿರ್ಮಿಸಿ ಅಲ್ಲಿ ದಾಸೋಹ ವ್ಯವಸ್ಥೆಯನ್ನು ಕಲ್ಪಿಸಿ ಅಲ್ಲಿಗೆ ಬರುವಂತವರೆಲ್ಲರನ್ನು ಸಮಾನರಾಗಿ ಕಾಣುವುದನ್ನು ನೋಡಿದರೆ ಬಸವಣ್ಣನವರ ವ್ಯಕ್ತಿತ್ವ ಹಾಗೂ ನಡೆ-ನುಡಿ ನಮಗೆ, ಪರಿಚಯವಾಗಿ ಬಿಡುತ್ತದೆ. ಅಲ್ಲದೆ ಬಸವಣ್ಣ ಕೇವಲ ಆಡಿದವನಲ್ಲಾ, ಮಾಡಿತೋರಿಸಿದವನಾಗಿದ್ದಾನೆ. ಹಾಗಾಗಿ ಬಸವಣ್ಣನ ನಡೆ-ನುಡಿಯ ಕುರಿತು ಅವನ ಈ ಮಾತನ್ನು ನೋಡಬಹುದಾಗಿದೆ.

ಕಂಡ ಭಕ್ತರಿಗೆ ಕೈ ಮುಗಿಯುವಾತನೆ ಭಕ್ತ
ಮೃದು ವಚನವೆ ಸಕಲ ಜಪಂಗಳಯ್ಯಾ
ಮೃದು ವಚನವೆ ಸಕಲ ತಪಂಗಳಯ್ಯಾ
ಸದುವಿನಯವೆ ಸದಾಶಿವನ ಒಲುಮೆಯಯ್ಯಾ,
ಕೂಡಲ ಸಂಗಯ್ಯಾನಂತಲ್ಲದೊಲ್ಲನಯ್ಯಾ

(ಬ.ವ.ವ.ಸಂ. -೨೪೪)

ಬಸವಣ್ಣನವರ ಮೃದುಸ್ವಭಾವ, ವಿನಯಶೀಲತೆ.ಸೌಜನ್ಯತೆ "ಕಂಡ ಭಕ್ತರಿಗೆ ಕೈ ಮುಗಿಯವ" ಭಾವನೆ ತೀರ ಸ್ವಾಭಾವಿಕವಾದುದ್ದಾಗಿದೆ. ಬಸವಣ್ಣನವರು ರಚಿಸಿದ ವಚನಗಳನ್ನು ನೋಡಿದಾಗ ಆತನ ವ್ಯಕ್ತಿತ್ವದ ಚಿತ್ರಣ ನಮ್ಮ ಕಣ್ಣಮುಂದೆ ಕಾಣದೆ ಇರದು. ಉನ್ನತವಾದ ಹುದ್ದೆಯಲ್ಲಿದ್ದರೆ ಬಸವಣ್ಣ ತಾನೊಬ್ಬ ಮಂತ್ರಿ ಪದವಿಯಲ್ಲಿರುವವನು ಎಂಬ ಅಧಿಕಾರದ ಮಾತಿನಿಂದ ಹೇಳದೆ, ತಾನೊಬ್ಬ ಕಟ್ಟಕಡೆಯವನು ಸಣ್ಣವನು, "ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ" ಎಂದು ತಾನು ಒಬ್ಬ ಸಾಮಾನ್ಯ ವ್ಯಕ್ತಿ ತನ್ನಂತೆಯೇ ಸಮಾಜದ ಎಲ್ಲಾ ಜನರು ಶ್ರೇಷ್ಠರು, ಸಮಾನರು. ಎಂಬ ಮಾತಿನ ಮೂಲಕ ಸಮಾನತೆಯನ್ನು ಸಾಧಿಸುವುದರ ಜೊತೆಗೆ ತನ್ನ ವ್ಯಕ್ತಿತ್ವದ ಶುದ್ಧಿಗೆ, ಸಾಧನೆಗೆ ದುಡಿಯುತ್ತಾನೆ. ಬಸವಣ್ಣನವರನ್ನು ಕುರಿತು ರಚಿತಗೊಂಡಂತಹ ಅನೇಕ ಕಾವ್ಯಗಳಲ್ಲಿಯೂ ವಿನಯವಂತಿಕೆ, ಮೃದುಸ್ವಭಾವ, ಪರಹಿತ ಆಲೋಚನೆ ಸೌಜನ್ಯಯುತವಾದ ಚಿತ್ರಣವನ್ನು ಕಾಣಬಹುದಾಗಿದೆ. ಹನ್ನೆರಡನೆಯ ಶತಮಾನದ ಕಾಲದಲ್ಲಿ ಅನುಭವಮಂಟಪದ ನಿರ್ವಹಣೆಯನ್ನು ಮಾಡುತ್ತಾ ಮಹಾಮನೆಯನ್ನು ಸ್ಥಾಪಿಸಿ ಅದರಲ್ಲಿ ದಿನನಿತ್ಯವೂ ದಾಸೋಹದ ವ್ಯವಸ್ಥೆಯನ್ನು ಮಾಡಿದ್ದಲ್ಲದೆ, ಅಲ್ಲಿಗೆ ಬರುವ ಭಕ್ತರೆಲ್ಲರನ್ನೂ ಸಮಾನತೆಯಿಂದ ಕಂಡು ವಿನಯಶೀಲತೆಯಿಂದ ಅವರನ್ನು ಬರಮಾಡಿಕೊಂಡರು ದಾಸೋಹ ಮಾಡುವುದೆಂದರೆ ಸುಲಭದ ಕಾರ್ಯವಲ್ಲ ಇಂತಹ ಕಾರ್ಯದಲ್ಲಿ ಬಸವಣ್ಣ ತನು,ಮನ,ಧನದ ಸಮೇತವಾಗಿ ತೊಡಗಿಸಿಕೊಂಡು ದಿನನಿತ್ಯ ಲಕ್ಷದತೊಂಬತ್ತಾರು ಗಣಂಗಳಿಗೆ ದಾಸೋಹ ಮಾಡುತ್ತಿದ್ದನಂತೆ. ಇದರಿಂದ ಬಸವಣ್ಣ ಇತರರಿಗೆ ಮಾರ್ಗದರ್ಶಕನಾಗಿ ಅಂದು ನಿಂತವನಾಗಿದ್ದಾನೆ. ಹರಿಹರ ತನ್ನ ಬಸವರಾಜದೇವರ ರಗಳೆಯಲ್ಲಿ ಶಿವ ಶರಣರ ಜೊತೆಯಲ್ಲಿ ಬಸವಣ್ಣ ನಡೆದುಕೊಳ್ಳುತ್ತಿದ್ದ ಬಗೆಯನ್ನು ಈ ರೀತಿಯಾಗಿ ಹೇಳುತ್ತಾನೆ. "ತಪ್ಪದೆಲ್ಲರ್ಗೆ ತರತರಹದಿಂದ ಮೈಯುಕ್ಕಿ ಪಲ್ಗಿರಿದು, ತಗ್ಗಿ ತಲೆಗೆರೆದು ಬೆರಳುಕಟ್ಟಿ, ಕಾಲ್ಗೆರಗಿ ಕುಗ್ಗಿ ಕಿಂಕರತೆಯುಂ, ನೆರೆಪಚ್ಚಿ ಕೈಗೊಟ್ಟು ತಂದು ವಿಜಯಂಗೈಸಿ ಕುಳ್ಳಿರಿಸಿ"[೨] ಕೇವಲ ಮಾತಿನಲ್ಲಿಯೆ ಮರಳು ಮಾಡುವ ಕೃತಕ ವೇಷದಾರಿಯಾಗದೆ ಬಸವಣ್ಣ ತನ್ನ ಮನದಾಳದಿಂದ, ನಿಷ್ಠೆಯಿಂದ, ಭಕ್ತಿಯಿಂದ ಮಾಡವುದು ಕಾಯಕವಾಯಿತು. ಅಲ್ಲದೆ ಸೌಜನ್ಯಯುತವಾದ ಅವನ ಮಾತುಗಳಿಂದ ನಡತೆಯಿಂದ ಜನರ ಮನದಾಳಕ್ಕಿಳಿದನು. ಇದರಿಂದಲೇ ಬಸವಣ್ಣನವರಿಗೆ ಸಾಮಾಜಿಕವಾಗಿ ಹೋರಾಟ ಮಾಡುವ ಶಕ್ತಿ ದೊರೆಕಿತೇನೋ? ಎನಿಸುತ್ತದೆ. ಆತನ ದಯಾಪರತೆ, ಧೀನರ ಬಗ್ಗೆ, ದಲಿತರ ಬಗ್ಗೆ ಹೊಂದಿದ್ದ ಕಳಕಳಿ ಸಾಮಾಜಿಕ, ಆರ್ಥಿಕ

ಕಳಕಳಿ, ಧಾರ್ಮಿಕ ಮನೋಭಾವ ಆತನ ನಡತೆಯನ್ನು ಇನ್ನಷ್ಟು ಶುದ್ಧಗೊಳಿಸುತ್ತಾ ಬಲಪಡಿಸುತ್ತಿತ್ತ, ಬಸವಣ್ಣನನ್ನು ಕಾಣಲು ಬರುವ ಆತನ ಆಂದೋಲನದಲ್ಲಿ ಪಾಲ್ಗೊಳ್ಳುವ ಉತ್ಸಾಹದಿಂದ ಬರುವ ರಾಜರಿಂದ ಹಿಡಿದು ಸಾಮಾನ್ಯ ಸೇವಕನವರೆಗೂ, ಮೇಲ್ಜಾತಿಯಿಂದ ಹಿಡಿದು ಕೆಳಜಾತಿಯವರೆಗೂ, ಬಸವಣ್ಣ ನಮ್ಮವ, ನಮ್ಮವ ಎನ್ನುವಷ್ಟರ ಮಟ್ಟಿಗೆ ಆತನ ಜೀವನ ಮತ್ತು ವ್ಯಕ್ತಿತ್ವ ಹಾಗೂ –ನಡೆನುಡಿಗಳಿದ್ದವು.

ದಯವಿಲ್ಲದ ಧರ್ಮವದೇವುದಯ್ಯಾ ?

ದಯವೇ ಬೇಕು ಸರ್ವ ಪ್ರಾಣಿಗಳೆಲ್ಲರಲ್ಲಿ

ದಯವೇ ಧರ್ಮದ ಮೂಲವಯ್ಯಾ

ಕೂಡಲ ಸಂಗಯ್ಯನಂತಲ್ಲದೊಲ್ಲನಯ್ಯಾ.

(ಬ.ವ.ವ.ಸಂ–೨೪೭)

ದಯಪರತೆಯುಳ್ಳ ಬಸವಣ್ಣನ ಹೃದಯ ಮಿಡಿಯುವುದು ಶೋಷಣೆಗೊಳಾಗಿರುವವರ ಬಗ್ಗೆ ಅಸಾಯಕತೆಯಲ್ಲಿರುವುದರ ಬಗ್ಗೆ ಈ ಮೇಲಿನ ವಚನವೇ ಹೇಳುತ್ತದೆ ಬಸವಣ್ಣನ ಹೃತ್ಪೂರ್ವಕ ಸಹಾನೂಭೂತಿಯನ್ನು. ಇದಕ್ಕೆ ನಿದರ್ಶನವಾಗಿ, ಹರಿಹರನ ಬಸವರಾಜ ದೇವರ ರಗಳೆಯಲ್ಲಿ ಬಂದ ಸನ್ನಿವೇಶವನ್ನು ನೋಡಬಹುದಾಗಿದೆ. ಒಮ್ಮೆ ಜಂಗಮ ವೇಷದಾರಿಗಳಾದ ಕಳ್ಳರು ಆತನ ಮನೆಗೆನುಗ್ಗಿ ಅಲ್ಲಿನ ಹಸುಗಳನ್ನು ಅಪಹರಿಸಿಕೊಂಡು ಹೋಗುತ್ತಿದ್ದರಂತೆ. ಈ ವಿಷಯ ತಿಳಿದ ಬಸವಣ್ಣ "ತಾಯ್ಗಳುಮ್ಮಳಿಸಲಾಗದು ಕರುಗಳು ಬಿಡಿರೇ" ಎಂದು ಕರುಗಳಿಲ್ಲದ ಹಸುಗಳು ಹಸುಗಳಿಲ್ಲದ ಕರುಗಳು ನೋಯುತ್ತವೆಂದು ಕರುಗಳನ್ನು ಕಳುಹಿಸಿರೆಂದು ಆಳುಗಳಿಗೆ ಹೇಳಿದನಂತೆ ಈ ಪ್ರಸಂಗವು ಬಸವಣ್ಣನ ವಾತ್ಸಲ್ಯ ಮಮತೆಯನ್ನು, ಆತನ ಉದಾರಗುಣದ ವ್ಯಕ್ತಿತ್ವವನ್ನು ಸುಂದರವಾಗಿ ಚಿತ್ರಿಸುತ್ತದೆ. ವ್ಯಕ್ತಿತ್ವವಿಕಸಗೊಳ್ಳಲು ಒಂದು ಧರ್ಮವಿರಬೇಕಾಗುತ್ತದೆ. ಆ ಧರ್ಮವು ಮಾನವೀಯ ಮೌಲ್ಯಗಳ ಮಿಳಿತದಿಂದ ನಿರ್ಮಾಣಗೊಂಡಿರಬೇಕು.ಇದರಿಂದ ವ್ಯಕ್ತಿಯು ಮತ್ತು ಸಮಾಜವು ಸುಧಾರಣೆಗೊಳ್ಳುತ್ತದೆ. ಬಸವಣ್ಣ "ದಯವೇ ಧರ್ಮದ ಮೂಲ" ಎಂದು ಧರ್ಮ ಎಂದೆನಿಸಿಕೊಂಡದ್ದು ಮಾನವೀಯತೆಯ ನೆಲೆಯಲ್ಲಿ ಸಿದ್ದಗೊಂಡಿರಬೇಕು ಎನ್ನುವ ತತ್ವ ವೈಚಾರಿಕ ವಾದ ಸಿದ್ಧಾಂತವಾಗಿದೆ.

ಬಸವಣ್ಣನದು ಯಾವುದೋ ಪಟ್ಟಭದ್ರಾಹಿತಾಸಕ್ತಿಗೆ ತಲೆಬಾಗುವ ನಾಗರೀಕ ರೂಪವಲ್ಲ, ಕಷ್ಟಜೀವಿಗಳಿಗೆ ಹೆಗಲಕೊಟ್ಟು ನಿಲ್ಲುವ ಸ್ವಭಾವ ಶೋಷಿತರನ್ನು ಕಂಡು ಮರುಗುವ ಸ್ವಭಾವ ಆತನದು, ಶರಣರಿಗೆ ಭಕ್ತರಿಗೆ ಅವನು ಎಷ್ಟು ಮೃದುವಾಗಬಲ್ಲನೋ ? ತನ್ನನಿರ್ದಾರ ಸಂಕಲ್ಪಗಳಿಗೆ ತನ್ನ ನಂಬಿಕೆಗಳಿಗೆ ಬದ್ದನಾಗಿ ಅವುಗಳನ್ನು ಕೃತಿಗಿಳಿಸುವಲ್ಲಿ ಬಂದೆರಗುವ ಕಷ್ಟಗಳನ್ನು ಎದುರಿಸಬೇಕಾದ ಸನ್ನಿವೇಶಗಳಲ್ಲಿ ಆತ ಕಠಕಠಿಣವಾಗಿ ನಿಲ್ಲಬಲ್ಲವಂತಹ ವ್ಯಕ್ತಿಯಾಗಿದ್ದಾನೆ. ಬಸವಣ್ಣನವರಿಗೆ ಇಂತಹ ಮನೋಸ್ಥೈರ್ಯವಿಲ್ಲದಿದ್ದರೆ ಆತ ಕನ್ನಡನಾಡಿನ ಜನತೆಯ ಹೃದಯದ ಆರಾಧ್ಯಸ್ಥಾನದಲ್ಲಿರುತ್ತಿರಲಿಲ್ಲವೇನೋ? ಬಸವಣ್ಣನವರು ತಮ್ಮ

ಜೀವನುದ್ದಕ್ಕೂ ಸಂಪ್ರದಾಯವಾದಿಗಳಿಂದ, ಅನೇಕ ಮತ್ಸರಿಗಳಿಂದ, ಪ್ರಭುತ್ವದ ಹಿಡಿತದಿಂದ ಎದುರಿಸಲ್ಪಟ್ಟರೂ, ಆತನು ತನ್ನನಂಬಿಕೆಯನ್ನು ತಾನು ನಂಬಿದ್ದ ಸಿದ್ಧಾಂತವನ್ನು, ತನ್ನ ವೈಚಾರಿಕ ನಿಲುವನ್ನು, ಸಮಾಜವಾದಿ ಧೋರಣೆಯನ್ನು ಯಾವುದೇ ಕಾರಣಕ್ಕು ಗಾಳಿಗೆ ತೂರಿ ಹಿಂದಿನ ವ್ಯವಸ್ಥೆಯ ಜೊತೆಗೆ ರಾಜಿ ಮಾಡಿಕೊಳ್ಳಲು ಸಿದ್ದನಿರಲಿಲ್ಲ, ಹನ್ನೆರಡನೆಯ ಶತಮಾನದಲ್ಲಿ ಒಬ್ಬ ಎಳೆಯವಯಸ್ಸಿನ ಬಾಲಕ ಅಂದಿನ ಅಂದ ಆಚರಣೆಯ ಸಾಂಪ್ರದಾಯಕತೆಯನ್ನು ಧಿಕ್ಕರಿಸಿ, ಅನೇಕ ದೇವತೆಗಳ ಆರಾದನೆ ಮಾಡುವುದನ್ನು ನಿಂದಿಸಿ, ನಂಬಿಕೊಂಡು ಬಂದಿದ್ದ ಒಂದ ಸಂಪ್ರದಾಯದ ವಿರುದ್ಧ ಹೋರಾಟಮಾಡುವುದರ ಜೊತೆಗೆ ತನ್ನ ಮನತನದ ಸಂಪ್ರದಾಯವನ್ನು ರೀತಿನೀತಿಗಳನ್ನು ಧಿಕ್ಕರಿಸಿ ತನಗೆ ಹಾಕಿದ್ದ ಯಜ್ಞೋಪವಿತ ಜನಿವಾರವನ್ನು ಕಿತ್ತೋಗೆದು ಅಂದಿನ ವಿಷಯ ಸಂಪ್ರದಾಯದ ಸಮಾಜವನ್ನು ಎದುರಿಸಬೇಕಾದರೆ ಎಂಥಾ ಧೈರ್ಯಬೇಕಾಗಿತ್ತು ? ಅಂಜದೇ ಅಳುಕದೆ ಅಂತಹ ಸಾಹಸವನ್ನು ಮಾಡಿದ್ದ ಬಸವಣ್ಣ, ಮುಂದೆ ರಾಜಪ್ರಭುತ್ವದಲ್ಲಿ ಬಿಜ್ಜಳನ ಅಧಿಕಾರಿಯಾದಾಗ ಅಲ್ಲಿನ ರಾಜಕೀಯ ಕುತಂತ್ರಿಗಳ ಕುತಂತ್ರಗಳಿಗೆ ಬಲಿಯಾಗುವ ಸಂದರ್ಭ ಬಂದಾಗ ಆ ಬಿಕ್ಕಟ್ಟುಗಳನ್ನು ವಿರೋಧಗಳನ್ನು ಎದುರಿಸಬೇಕಾಗಿತ್ತು, ತನ್ನ ಸ್ವಂತ ಬುದ್ಧಿಮತ್ತೆ ಜ್ಞಾನದಿಂದ ಕರಣಿಕನಾಗಿದ್ದವನು ಚಕ್ರಾದಿಪತ್ಯವೊಂದರ ಕೋಶದ ಶ್ರೇಷ್ಠ ಅಧಿಕಾರಿಯಾಗಿ ಅಧಿಕಾರಿಕ್ಕೆರಿದ ಇವನನ್ನು ಕಂಡರೆ ಅನೇಕರಿಗೆ ಹೊಟ್ಟೆಕಿಚ್ಚು, ಅವರೆಲ್ಲ ಬಸವಣ್ಣನ ಮೇಲೆ ರಾಜ ಬಿಜ್ಜಳನಲ್ಲಿ ದೂರಿನ ಸುರಿಮಳೆಯನ್ನೆ ಸುರಿಸಿ ಅಲ್ಲಿನ ಶಾಂತವಾತವರಣವನ್ನು ಪ್ರಕ್ಷುಬ್ಧಗೊಳಿಸುತ್ತಾರೆ. ಆದರೆ ಇದನ್ನೆಲ್ಲಾ ಎದುರಿಸುವ ಶಕ್ತಿ, ಬುದ್ಧಿಯ ಸಮತೋಲನ ಕಠಿಣ ಪರಿಸ್ಥಿತಿಯಲ್ಲೂ ಧೈರ್ಯದಿಂದ, ವಿನಯಶೀಲತೆಯಿಂದ ,ಸೌಜನ್ಯದಿಂದ, ತಾಳ್ಮೆಯಿಂದ ಇದ್ದು, ತನ್ನತನವನ್ನು ಬಿಡದೇ ತನ್ನ ತತ್ವಾದರ್ಶಗಳಿಗೆ ಬದ್ದನಾಗಿ ಯಾವುದೇ ರಾಜಕೀಯ, ಕುತಂತ್ರ ಷಡ್ಯಂತ್ರಗಳಿಗೆ ಬಲಿಯಾಗದೆ ಎದ್ದು ನಿಲ್ಲುವ ಪ್ರತಿಭಟಿಸುವ ಸಾಮಾರ್ಥ್ಯ ಬಸವಣ್ಣನಿಗಿತ್ತು, ಇದಕ್ಕೆ ಆತನ ಈ ವಚನವನ್ನು ನೋಡಬಹುದು.

ಆರು ಮುನಿದು ನಮ್ಮನೇನ ಮಾಡುವರು?
ಊರುಮುನಿದು ನಮ್ಮನೆಂತು ಮಾಡುವರು ?
ನಮ್ಮಕುನ್ನಿಗೆ ಕೂಸ ಕೊಡಬೇಡ .
ನಮ್ಮಸೊಣಗಂಗೆ ತಳಿಗೆಯಲಿಕ್ಕಬೇಡ
ಆನೆಯ ಮೇಲೆ ಹೋಹವನ ಶ್ವಾನ ಕಚ್ಚ ಬಲ್ಲುದೆ.
ನಮಗೆ ನಮ್ಮ ಕೂಡಲ ಸಂಗನ್ನುಳ್ಳನ್ನಕ್ಕ ?

(ಬಸವಣ್ಣನವರ ವ.ಸಂ.– ೭೫೩)

ಯಾರಮುನಿಸಿಗೂ ಎದರದ ಸ್ವಭಾವ ಈ ವಚನದಲ್ಲಿ ಸ್ಪಷ್ಟವಾಗಿದೆ. ಸನಾತನವಾದಿಗಳು ತನ್ನ ಬಗ್ಗೆ ಇಲ್ಲಸಲ್ಲದ್ದು ಮಾತನಾಡಿ ಬಿಜ್ಜಳನಿಗೆ ದೂರುನೀಡಿ ಅರಸನಕಡೆಯಿಂದ ಕಿರುಕುಳವನ್ನು ನೀಡಿ ಬಸವಣ್ಣನನ್ನು ಅಂಕೆಯಲ್ಲಿಡುವ ಯತ್ನ ನಡೆಸಿರಬೇಕು. ಇದರಿಂದ ಕುಗ್ಗದೆ ಇವರಕುತಂತ್ರಕ್ಕೆ ಜಗ್ಗದೆ ತನ್ನ ಸ್ಪಷ್ಟ ನಿಲುವಿನಲ್ಲಿ ಮುಂದುವರೆಯುವಂತಹ ಚೈತನ್ಯ ಬಸವಣ್ಣನಿಗಿತ್ತು. ತನಗೆ

ಇಂತವರ ಸಂಬಂಧವಾಗಲಿ ಸಾಮಿಪ್ಯವಾಗಲಿ ಬೇಡ ಎಂದು ನಿರಾಕರಿಸಿ "ಆನೆಯ ಮೇಲೆ ಹೋಹವನ ಶ್ವಾನ ಕಚ್ಚಬಲ್ಲದೆ" ಎಂದು ತಾನು ಯಾರಿಗೂ ಹೆದರದೇ ತನ್ನ ಸಾಮಾಜಿಕ ಹೋರಾಟದಲ್ಲಿ ಮುಂದುವರಿಯುತ್ತೇನೆ ಎಂದು ಹೇಳುವ ಧೈರ್ಯ ಬಸವಣ್ಣನಿಗೆ ಇತ್ತು. ಜೀವನದಲ್ಲಿ ಏನನ್ನೇ ಆಗಲಿ ಎದುರಿಸುವ ಶಕ್ತಿ ಬಸವಣ್ಣನಿಗೆ ಬಂದದ್ದು, ಭಂಡತನದಿಂದಲ್ಲ. ಅವನ ನೈತಿಕ ನಿಷ್ಠೆ, ನಿಸ್ವಾರ್ಥದಿಂದ ಬಂದ ಶಕ್ತಿಯಾಗಿತ್ತು. ಒಂದುಕಡೆ ತನ್ನ ನಂಬುಗೆ ಜೀವನ ಮೌಲ್ಯಗಳು ಅತ್ಯಂತ ಸ್ಪಷ್ಟವಾಗಿ ಅವನ ಜೀವನಕ್ಕೆ ಸಾಧನೆಗೆ ಹೋರಾಟಕ್ಕೆ ಭದ್ರವಾದ ತಳಹದಿಯನ್ನು ಹಾಕಿದ್ದವು. ಇನ್ನೊಂದು ಕಡೆ ಇನ್ನಿತರ ವಿಷಯಗಳಲ್ಲಿ ಎಷ್ಟೆ ಅಂತರ್ಮುಖಿಯಾಗಿ, ಕರುಣಾಮಯಿಯಾಗಿದ್ದರೂ, ವ್ಯವಹಾರದಲ್ಲಿ ಕರ್ತವ್ಯಪರತೆಯಲ್ಲಿ ಅತ್ಯಂತ ನಿಷ್ಠುರನು ಪರಿಶುದ್ಧನು ಆಗಿದ್ದನು. ತನ್ನ ಒಂದು ವಚನದಲ್ಲಿ ಹೇಳಿದಂತೆ

ನ್ಯಾಯ ನಿಷ್ಠುರಿ
ದಾಕ್ಷಿಣ್ಯಪರ ನಾನಲ್ಲ
ಲೋಕ ವಿರೋಧಿ ಶರಣನಾರಿಗಂಜುವನಲ್ಲ.
ಕೂಡಲ ಸಂಗಮದೇವನ ರಾಜತೇಜದಲ್ಲಿಪ್ಪನಾಗಿ

(ಬ.ವ.ವ.ಸಂ–೭೫೪)

ಸದಾ ವಸ್ತುನಿಷ್ಠವಾದ ಆಲೋಚನಾ ವಿಚಾರದಫಲವಾದುದರಿಂದ ತನ್ನ ಅನಿಸಿಕೆಯನ್ನು ಸರಿಯೆಂದು ತನಗೆ ತಿಳಿದದ್ದನ್ನು ಮಾಡುವುದು ಆತನಿಗೆ ಬಾಲ್ಯದಿಂದಲೇ ರೂಢಿಯಾಗಿಬಿಟ್ಟಿತ್ತು. ತನ್ನ ನೌಕರಿಯನ್ನು ಕಾಪಾಡಿಕೊಳ್ಳುವ ಆಸೆಯಿಂದಾಗಲಿ, ತನ್ನ ಅಳಿವು ಉಳಿವಿನ ಪ್ರಶ್ನೆಯಿಂದಾಗಲಿ ಬಸವಣ್ಣನವರು ಎಲ್ಲರೊಂದಿಗೆ ಸಾರ ಸಗಟವಾಗಿ ಹೊಂದಿಕೊಂಡು, ಕಾಲಕ್ಕನುಗುಣವಾಗಿದ್ದ ತಾನು ನಂಬಿದ್ದ, ಆದರ್ಶ ತತ್ವ ಸಿದ್ಧಾಂತಗಳನ್ನು ಸಮಾನನತೆಯ ಸಮಾಜದ ಆಶಯವನ್ನು ಗಾಳಿಗೆತೂರಿ ತಾನು ಐಶರಾಮಿಯಾಗಿ ಬದುಕಬೇಕೆಂಬ ಜಾಣತನದಿಂದಾಗಲಿ ಬಸವಣ್ಣನವರು ಜೀವಿಸಲಿಲ್ಲ. ಈ ರೀತಿಯ ನಿಷ್ಠುರವಾದಿಯಾದ ಬಸವಣ್ಣ ಭಕ್ತರ, ಹಿರಿಯರ ಮನಸ್ಸನ್ನು ಸ್ವಲ್ಪವು ನೋಯಿಸದ ಸೌಜನ್ಯ ಮೂರ್ತಿಯಾಗಿ ಹರಿಹರನಲ್ಲಿ ಚಿತ್ರಗೊಂಡಿದ್ದಾನೆ "ಕಿನ್ನರ ಬೊಮ್ಮಣ್ಣನೆಂಬ ಶರಣನೊಬ್ಬನು ಮಹಾಮನೆಯಲ್ಲಿ ಒಂದು ದಿನ ಉಳ್ಳಿಯ ಅಡುಗೆ ಮಾಡಿಸಿದನಂತೆ ಇದರಿಂದ ಬಸವಣ್ಣ ಯಾರು ತಂದದ್ದು, ಈ ಉಳ್ಳಿಯನ್ನು ಎಂದು ನಿಂದಿಸಿದನಂತೆ ಇದನ್ನು ಕೇಳಿದ ಕಿನ್ನರ ಬೊಮ್ಮಯ್ಯ ಮಹಾಮನೆ ಬಿಟ್ಟು ಹೋಗುತ್ತಾನೆ. ಇದನ್ನು ತಿಳಿದ ಬಸವಣ್ಣ ತನ್ನ ತಪ್ಪು ಮಾತಿನಿಂದ ಭಕ್ತನ ಮನಸ್ಸಿಗೆ ನೋವಾದುದನ್ನರಿತು ಅವನನ್ನು ಪ್ರಸನ್ನಗೊಳಿಸಲು ಉಳ್ಳಿಯ ಗಾಡಿಯನ್ನು ತರಿಸಿ ಮೆರವಣಿಗೆ ಮಾಡಿ ದಾಸೋಹ ಮಾಡಿದನಂತೆ, ಇದಕಂಡು ಕಿನ್ನರ ಬೊಮ್ಮಣ್ಣ ಮರಳಿ ಮಹಾಮನೆಗೆ ಬರುತ್ತಾನಂತೆ"[3] ಈ ಪ್ರಸಿದ್ಧವಾದ ಕತೆಯಲ್ಲಿ ಅಡಗಿರುವುದು ಬಸವಣ್ಣನ ಸೌಜನ್ಯ ವಿನಯವಂತಿಕೆ, ತನ್ನ ತಪ್ಪನ್ನು ತಿದ್ದಿಕೊಳ್ಳುವ ಸ್ವಭಾವ ಕಾಣುತ್ತದೆ. ತನ್ನಿಂದ ತಪ್ಪಾಯಿತೆಂದು ತಿಳಿದಾಗ ಅದನ್ನು ಪಶ್ಚಾತ್ತಾಪ ಪ್ರಾಯಶ್ಚಿತ್ತಗಳ ಮೂಲಕ ತನ್ನನ್ನು ತಿದ್ದಿಕೊಳ್ಳುವ ಔದಾರ್ಯವು, ಆತನ ಹಿರಿಯ ಗುಣವು ನಮಗೆ ಕಾಣಿಸಬಹುದಾಗಿದೆ. ಶರಣರದು ಜಾತಿಗೆ ಪ್ರಾಮುಖ್ಯತೆ

ನೀಡದೆ ವ್ಯಕ್ತಿಗೆ ಹಾಗೂ ವ್ಯಕ್ತಿತ್ವಕ್ಕೆ ಪ್ರಾಮುಖ್ಯ ನೀಡುವ ಸ್ವಭಾವವಾಗಿದೆ ಅಂತೆಯೇ ಬಸವಣ್ಣನವರು ಕೂಡ ಇದಕ್ಕೆ ಹೊರತಲ್ಲ, ಒಮ್ಮೆ ಸಂಬೋಳಿ ನಾಗಿದೇವನೆಂಬ ದಲಿತ ಭಕ್ತನೊಬ್ಬನ ಮನೆಯಲ್ಲಿ ಅವನು ಆರೋಗಣೆ ಮಾಡಿದ ಬಗ್ಗೆ ಕೆಲವರು ರಾಜನಲ್ಲಿ ಚಾಡಿ ಹೇಳಿದಾಗ ಎಲ್ಲರೆದುರಿಗೆ ನಾಗಿದೇವನು ಮನುಷ್ಯನೆಂದು ತೋರಿಸಿಕೊಟ್ಟಿದ್ದ ಬಸವಣ್ಣ, ಜಾತಿಯಿಂದ ದೊಡ್ಡವರಾದವರು ಯಾರು ಇಲ್ಲ ಎಂಬ ತಿಳಿವನ್ನು ಪಡೆದುಕೊಂಡಿದ್ದವನಾಗಿದ್ದನು. ಅವರು ಮಾಡುವ ಕಾಯಕದಿಂದ ವೃತ್ತಿ ನಿರ್ಣಯವಾಗುವಂತಹ ಸಮಾಜದ ಕಲ್ಪನೆಯನ್ನು ಹೊತ್ತುಕೊಂಡು ಬಂದಿದ್ದ ಬಸವಣ್ಣ. ತನ್ನ ವಿಶ್ಲೇಷಣಾ ಬುದ್ಧಿಯಿಂದ, ಚಿಕಿತ್ಸಕ ಮನೋಭಾವದಿಂದ ಈ ಜಾತಿ ವ್ಯವಸ್ಥೆಯನ್ನು ನೋಡಿ ಖಂಡಿಸುತ್ತಾನೆ. ಅಲ್ಲದೇ ತಾನು ಉಚ್ಚಕುಲದಲ್ಲಿ ಹುಟ್ಟಿದವನು ಎಂಬ ಭಾವನೆಯು ನಿರ್ನಾಮವಾಗಲೆಂದು ತನ್ನನ್ನೇ ತಾನು ವ್ಯಂಗ್ಯವಾಗಿ ನೋಡಿಕೊಳ್ಳುತ್ತಾನೆ.

"ಉತ್ತಮ ಕುಲದಲ್ಲಿ ಹುಟ್ಟಿದನೆಂಬ
ಕಷ್ಟತನದ ಹೊರೆಯ ಹೊರಿಸದಿರಯ್ಯಾ
ಕಕ್ಕಯ್ಯನೊಕ್ಕುದನಿಕ್ಕ ನೋಡಯ್ಯಾ
ದಾಸಯ್ಯ ಶಿವದಾನವ ನೆರೆಯ ನೋಡಯ್ಯಾ
ಮನ್ನಣೆಯ ಚೆನ್ನಯ್ಯನೆನ್ನುವ ಮನ್ನಿಸ.
ಉನ್ನತ ಮಹಿಮ.
ಕೂಡಲ ಸಂಗಮದೇವಾ, ಶಿವಧೋ ಶಿವಧೋ ।

(ಬ.ವ.ವಸಂ.೩೪೪)

ಬಸವಣ್ಣನನ್ನು ಯಾರಾದರೂ ಉತ್ತಮ ಕುಲದವನು ಎಂದು ಕರೆದು ವಿಶೇಷ ಸ್ಥಾನವನ್ನು ನೀಡುವ ಪ್ರಯತ್ನ ಮಾಡಿದಾಗ ಸಹಜವಾಗಿ ತನ್ನಕುಲದ ವಿರೋದಿಯಾದ ಶರಣರ ಸ್ನೇಹ ಬಯಸಿ ಬಂದ ಬಸವಣ್ಣನಿಗೆ ಸಹಜವಾಯಿತು. ನೋವಾಗುತ್ತದೆ. ಇದರಿಂದ ಈ ಮೇಲಿನ ವಚನದಲ್ಲಿ ವ್ಯಕ್ಯಗೊಂಡಿರುವ ಆತನ ಅಭಿವ್ಯಕ್ತಿಯೇ ತೋರಿಸಿಕೊಡುತ್ತದೆ.

ಸೆಟ್ಟಿಯೆಂಬೆನೆ ಸಿರಿಯಾಳನ ?
ಮಡಿವಾಳ ನೆಂಬೆನೆ ಮಾಚಯ್ಯನ ?
ಡೋಹರನೆಂಬೆನೆ ಕಕ್ಕಯ್ಯನ ?
ಮಾದರ ನೆಂಬೆನೆ ಚೆನ್ನಯ್ಯನ
ಆನು ಹಾರುವನೆಂದಡೆ ಕೂಡಲ ಸಂಗಯ್ಯ ನಗುವನಯ್ಯಾ

(ಬ.ವ.ವಸಂ.೩೪೫)

ಸಮಾಜದ ಕೆಳಸ್ತರದ ವರ್ಗದ ಜಾತಿಗಳನ್ನು ಉನ್ನತೀಕರಿಸಿ, ನೊಂದಹೃದಯಳಿಗೆ ಸಾಂತ್ವನದ ವಚನಗಳ ಔಷದಿಯನ್ನು ನೀಡುವುದರ ಜೊತೆಗೆ ಪ್ರಭುತ್ವಕ್ಕೆ ಹಾಗೂ ಸಂಪ್ರದಾಯಶೀಲರಿಗೆ ಜಾತಿಯ ಸುಳ್ಳು ಮೋಹವನ್ನು ಸುಟ್ಟು ಅವರಿಗೆ ಅರಿವು ಮೂಡಿಸುವ ನಿಟ್ಟಿನಲ್ಲಿ ಸಮಾಜಕ್ಕೆ ಹಾಗೂ ಅಲ್ಲಿನ ತನಕ ನಂಬಿದ್ದ ಅಂದ ನಂಬಿಕೆಗಳಿಗೆ ಮಾರ್ಮಿಕವಾದ ಪೆಟ್ಟನ್ನು ನೀಡುತ್ತಾನೆ. ಇಂತಹ ವಿಚಾರಗಳು ಕೇವಲ ಸಂದರ್ಬೋಚಿತಗಳಾಗದೆ, ಅಲ್ಲಿನ ಕೆಳಸ್ತರದ ದಲಿತರ ಜೀವನವನ್ನು ನೋಡಿ ಅವರ ದೀನ ಸ್ಥಿತಿಗೆ ಮರುಗುತ್ತಾ ಅವರಿಗೆ ಸಾಮಾಜಿಕವಾದ ನ್ಯಾಯ ದೊರಕಿಸಿ ಅವರನ್ನು ಸಬಲರನ್ನಾಗಿಸುವ ಪ್ರಯತ್ನ ಮಡುವುದನ್ನು ನಾವು ಕಾಣಬಹುದಾಗಿದೆ. ಸಮಾಜದ ಎಲ್ಲಾ ಮಾನವರು ಇವರನ್ನು ಮನಿಷ್ಯರಂತೆ ಕಾಣಬೇಕೆಂಬ ಹಂಬಲ ತುಡಿತ ಮಿಡಿತಗಳು ಬಸವಣ್ಣ ವಿಶಿಷ್ಟ ಹಾಗೂ ಉದಾರತೆಯ ವ್ಯಕ್ತಿತ್ವಕ್ಕೆ ಹಿಡಿದ ಕೈಗನ್ನಡಿಯಾಗಿದೆ. ವೃತ್ತಿಗಳಿಂದ ಮೇಲು-ಕೀಳುಗಳೆಂದು ನಿರ್ಧರಿಸಿ ಜಾತಿ ವ್ಯವಸ್ಥೆಗೆ ಮೂಲ ಕಾರಣವನ್ನಾಗಿಸಿಕೊಂಡು ಶ್ರೇಣಿಕೃತವಾದ ಪದ್ಧತಿ ಪ್ರಾರಂಭವಾಗಿದ್ದರಿಂದ ಜಾತಿ ಜಾತಿಗಳಲ್ಲಿ ಮೇಲು-ಕೀಳು ಎಂಬ ಭಾವನೆ ಬೆಳದವು. ಇದರಕಡೆಗೆ ಗಮನ ಹರಿಸಿದ್ದ ಬಸವಣ್ಣ, ತನ್ನ ಸಾಮಾಜಿಕ, ಧಾರ್ಮಿಕ, ಆರ್ಥಿಕ ರಾಜಕೀಯ ಆಂದೋನಲನಕ್ಕೆ ಇದೆ ವಿಷಯ ವಿಚಾರ ತಳಪಾಯವೆಂದರಿತು, ಮಾನವೀಯ ಮೌಲ್ಯಗಳು ಕುಸಿತಗೊಂಡಿದ್ದರಿಂದ ಅವುಗಳನ್ನು ಎತ್ತಿಹಿಡಿದು, ಮಾನವೀಯ ಮೌಲ್ಯಗಳನ್ನು ಪುನರ್ ನಿರ್ಮಾಣ, ಮಾಡುವುದಕ್ಕೆ, ಕಂಕಣ ತೊಟ್ಟು ನಿಂತನು. ಇದರಿಂದ ಸಮಾಜದ ಏಳಿಗೆಗಾಗಿ ನಿರ್ಮಾಣವಾಗಿರುವ ಯಾವುದೇ ವೃತ್ತಿಯಿರಲಿ ಅದು ಶ್ರೇಷ್ಠವಾದುದೆಂದು, ಯಾವುದೇ ವೃತ್ತಿಯನ್ನಾಗಲಿ ಕನಿಷ್ಠವಾದುದೆಂದು ಭಾವಿಸದೆ ಅವೆಲ್ಲವು ಸಮಾನವಾದವುಗಳೆಂದು ಸಾರಲು ಪ್ರಯತ್ನಿಸಿದ, ವೃತ್ತಿಯು ಜೀವನೋಪಾಯಕ್ಕೆ ಮೂಲಕಾರಣ ಎಂದು ಹೇಳಿದ್ದು, ಆರ್ಥಿಕವಾಗಿ ಪರಾವಲಂಬನೆಯಾಗದಿರುವುದು ಇದರ ಮೂಲತತ್ವ ಒಂದು ವೇಳೆ ಯಾವುದೇ ವೃತ್ತಿಯನ್ನು ಬಿಟ್ಟರು, ಕಡೆಗಣಿಸಿದರು ಸಮಾಜವು ಊನವಾಗುತ್ತದೆ. ಆದ್ದರಿಂದ ಎಲ್ಲ ವೃತ್ತಿಗಳು ಅವಶ್ಯ ಹಾಗೂ ಸಮಾಜದ ಬೆಳವಣಿಗೆಗೆ ಅನಿವಾರ್ಯ. ಅಲ್ಲದೆ ಅವರವರ ವೃತ್ತಿಗನುಗುಣವಾಗಿ ಹಣದ ಸಂಪಾದನೆ ನಡೆಯುತ್ತದೆ ಇದರಿಂದ ವ್ಯಾಪಾರಸ್ಥರು ಶ್ರೀಮಂತರು ಕೇವಲ ಶ್ರೀಮಂತರಾಗಿಯೇ ಇರುತ್ತಾರೆ ಎಂಬ ಕಲ್ಪನೆಯ ಆಧಾರದ ಮೇಲೆ ಬಸವಣ್ಣ ವೃತ್ತಿಗೆ ಒಂದು ಧಾರ್ಮಿಕ ಚೌಕ್ಕಟ್ಟನ್ನು ನೀಡಿ ಅದಕ್ಕೆ "ಕಾಯಕ" ಎಂದು ಕರೆದರು ಇದರಿಂದ ಪ್ರತಿಯೊಬ್ಬರ ವೃತ್ತಿ, ಕರ್ತವ್ಯವಾಗಿ, ಮಾರ್ಪಾಟ್ಟು, ಅವರು ಭ್ರಷ್ಟಾಚಾರಿಗಳಾಗದಂತೆ, ಅಡ್ಡದಾರಿ ಹಿಡಿಯದಂತೆ ತಡೆಗಟ್ಟುವ ನಿಟ್ಟಿನಲ್ಲಿ ಬಸವಣ್ಣ ಬಲು ಜಾಗರೂಕತೆಯಿಂದ ಈ ತತ್ವವನ್ನು ನೀಡುತ್ತಾನೆ. ಕರ್ತವ್ಯವನ್ನು ಲಿಂಗಪೂಜೆಗಿಂತಲು ಶ್ರೇಷ್ಠವಾದುದೆಂದು ಹೇಳಿ, ಸೋಮಾರಿತನ-ಭಿಕ್ಷೆಯಿಂದ ಜನ ಬದುಕಬಾರದೆಂದು ಹೇಳುತ್ತಾರೆ, ಗಳಿಸಿದುದರಲ್ಲಿ ಎಷ್ಟುಬೇಕೋ ಅಷ್ಟನ್ನೇ ತಮಗೆ ತಮ್ಮ ಕುಟುಂಬಕ್ಕೆ ಬಳಸಿಕೊಂಡು ಮಿಕ್ಕದ್ದನ್ನು ದಾಸೋಹಕ್ಕಾಗಿ ಬಳಸಬೇಕೆಂದು ಹೇಳಿದರು. ಇದರಿಂದ ಆಸ್ತಿಯ ಅಸಮಾನ ವಿಂಗಡಣೆ ಪ್ರಶ್ನೆ ಬರುವುದಿಲ್ಲ. ಉಳ್ಳವರು –ಇಲ್ಲದವರ ನಡುವಣ ಕಂದರ, ತಾರತಮ್ಯ ಉಳಿಯುವುದಿಲ್ಲ ಎಂದು ನಿಲವು ಬಸವಣ್ಣನದಾಗಿದೆ. ಇಂತಹ ವಿಚಾರಗಳು ಇಡಿ ದೇಶದ ಬೆಳವಣಿಗೆಗೆ ಪೂರಕವಾಗಿ ನಿಲ್ಲ

ಬಲ್ಲ ಆರ್ಥಿಕ ಸಿದ್ಧಾಂತಗಳಾಗಿವೆ. ಇಂತಹ ಸಿದ್ಧಾಂತವನ್ನು ಬಸವಣ್ಣ ನೀಡಿ, ಒಬ್ಬ ಆರ್ಥಿಕ ತಜ್ಞನಾಗಿದ್ದಾನೆ. ಎಂದರೆ ತಪ್ಪೇನಲ್ಲ ಎಂಬುದಾಗಿದೆ, ಬಹುಮುಖ ಪ್ರತಿಭೆಯಾಗಿರುವ ಬಸವಣ್ಣನವರಲ್ಲಿ ಇಂತಹ ವಿಚಾರಗಳು ಸ್ವಾಭಾವಿಕವಾಗಿಯೇ ಹೊಮ್ಮುತ್ತವೆ.

ಬಸವಣ್ಣನು ವ್ಯವಹಾರ ಶುದ್ಧನಾಗಿರದಿದ್ದರೆ ಬಿಜ್ಜಳನ ಆಸ್ಥಾನದ ಎಲ್ಲರ ವಿರೋಧದ ನಡುವೆ ಅವನು ಉಳಿಯಲು ಸಾಧ್ಯವಿರಲಿಲ್ಲ. ಇವನನ್ನು ಎಲ್ಲರು ಅಧಿಕಾರದಿಂದ ಕೆಳಗಿಳಿಸಬೇಕೆಂದು ಮಾಡಿದ ಕುತಂತ್ರಗಳು ಮಣ್ಣುಪಾಲಾಗಲು ಕಾರಣ ಇವನ ನಿರ್ಮಲ ಹಸ್ತ, ನಿಷ್ಠೆ ಮತ್ತು ನಿಯತ್ತಿನ ಕೆಲಸ, ಬಸವಣ್ಣ ಸಿದ್ಧ ದಂಡಾದಿಪತಿಯ ಅಳಿಯನಾಗಿ ಅವನ ಮರಣನಂತರ ಅವನು ಆಸ್ತಿಗೆಲ್ಲ ವಾರಸುದಾರನಾಗಿದ್ದನು. ಜೊತೆಗೆ ತಾನು ಉತ್ತಮ ಹುದ್ದೆಯಲ್ಲಿದ್ದು ಗಳಿಸಿದವನು ಇದನ್ನೆ ಅವನು ಶರಣರ ದಾಸೋಹಕ್ಕೆ ವಿನಿಯೋಗಿಸುತ್ತಿದ್ದ, ಇದರಿಂದ ಕೆಲ ಚಾಡಿಕೊರರ ಕೆಂಗಣ್ಣಿಗೆ ತುತ್ತಾಗಬೇಕಾಯ್ತು, ಬಿಜ್ಜಳನಿಗೆ ದೂರೂ ಹೋಗುತ್ತದೆ. ಇದರಿಂದ ಬಿಜ್ಜಳ ಇದ್ದಕ್ಕಿದ್ದಂತೆ ಲೆಕ್ಕ ಪರಿಶೋಧನೆಗೆ ತೊಡಗುತ್ತಾನೆ. ಬಸವಣ್ಣನ ಲೆಕ್ಕಪತ್ರ ಸರಿಯಾಗಿದ್ದುದಲ್ಲದೆ ಉಳಿದ ಹಣ ಎರಡು ಪಟ್ಟು ಜಾಸ್ತಿಯಾಗಿದ್ದಕ್ಕೆ ಬಿಜ್ಜಳನು ಮೆಚ್ಚಿಕೊಂಡನಂತೆ. ಈ ಸನ್ನಿವೇಶದಿಂದ ನಮಗೆ ತಿಳಿಯುವುದು ಇಷ್ಟು, ಯಾವಕಾಲದಲ್ಲಾಗಲೀ ತನಿಖೆಗೆ ಬಂದರೂ ಸರಿಯಾದ ಆಯವ್ಯಯದ ಲೆಕ್ಕವನ್ನು ತೋರಿಸಬಲ್ಲಂತಹ, ಕರಾರುವಕ್ಕಾದ ವ್ಯಕ್ತಿತ್ವ ಬಸವಣ್ಣನವರದು. ಇಂತಹ ಚಾಡಿಕೋರರ ಮಾತಿಗೆ ನೊಂದು ತಾನು ಬಿಜ್ಜಳನ ಭಂಡಾರದ ಹಣವನ್ನು ಸ್ವಂತಕ್ಕೆ ಬಳಸಿಲ್ಲ. ಬಳಸಲಾರೆನೆಂದು ಒಕ್ಕೋರಲಿನಿಂದ ನುಡಿಯುತ್ತಾನೆ.

ಊರಮುಂದೆ ಹಾಲಹಳ್ಳ ಹರಿಯುತ್ತಿರಲು
ಓರಯಾವಿನ ಬೆನ್ನ ಹರಿಯಲದೇಕಯ್ಯಾ ?
ಲಜ್ಜೆಗೆಡಲೇಕೆ ? ನಾಣುಗೆಡಲೇಕೆ ?
ಕೂಡಲಸಂಗಮ ದೇವರುಳ್ಳನ್ನಕ್ಕ
ಬಿಜ್ಜಳನ ಭಂಡಾರವೆನಗೇಕಯ್ಯಾ ?

ಎಂದು ಹೇಳುವ ಧೈರ್ಯ,ನೈತಿಕ ಸಾಮಾರ್ಥ್ಯ ಬಸವಣ್ಣನಿಗೆ ತನ್ನ ನಿಷ್ಠೆಯಿಂದ ರಕ್ತಗತವಾಗಿದ್ದಿತು.

ಬಸವಣ್ಣನವರ ವಚನಗಳು ಪ್ರಾಮಾಣಿಕ ವ್ಯಕ್ತಿಯೊಬ್ಬನ ಅಭಿವ್ಯಕ್ತಿಯಾಗಿದೆ. ವ್ಯವಹಾರದಲ್ಲಿ ಬಸವಣ್ಣನದು ಪ್ರಾಮಾಣೀಕತೆಯು ಹೇಗೆಯೋ ಆಧ್ಯಾತ್ಮಿಕ ಸಾಧನೆಯಲ್ಲಿಯೂ ಹಾಗೆಯೇ ಕಾಣುತ್ತದೆ. ಅವನು ತಾನು ಭಗವಂತನ ಅವತಾರವೆಂದು ಸೋಗಿ ಹಾಕಿಕೊಂಡು ತತ್ವಗಳನ್ನು ಉಪದೇಶ ಮಾಡುತ್ತಾ, ಕಾಲ ಕಳೆದವನಲ್ಲ ಕ್ರಾಂತಿಕಾರಿಯಾಗಿ ಕಾಯಕ ಯೋಗಿಯಾಗಿ ಸಾಮಾಜಿಕ ಹೋರಾಟದ ಇಳಿದ ಒಬ್ಬ ಧೀಮಂತ ಹೋರಾಟಗಾರನಾಗಿ ಹಿಂದುಳಿದ ವರ್ಗದ, ಶೋಷಿತರ ,ಇಲ್ಲದವರ ಬದುಕಿನ ಹೋರಾಟದ ನೇತೃತ್ವ ವಹಿಸಿಕೊಂಡ ನಾಯಕನಾಗಿದ್ದಾನೆ. ಬರಡಾದ ಭೂಮಿಯನ್ನು ಹಸನು ಮಾಡಿ ಹುಲುಸಾಗಿ ಬೆಳೆವ ಕನಸನ್ನು ಕಾಣುವ ಕನಸುಗಾರನಾಗಿ, ಸಮಾಜ ಸುಧಾರಕನಾಗಿ, ಬಸವಣ್ಣ ಬೆಳೆದು ಬರುತ್ತಾನೆ.

ಇದನ್ನು ಕಾಣಬೇಕೆಂಬ ಚಾಪಲ್ಯದ ಮುಗ್ಧ ಜೀವಿಯೊಂದು ಆ ದಿಸೆಯಲ್ಲಿ ಸಾಗುವಾಗ ಮೊದಮೊದಲು ಪ್ರಾಪಂಚಿಕ ಆಕರ್ಷಣೆಯಿಂದ ಪಾರಾಗಲಾರದೆ, ಹಿರಿಧರ ಹಂಬಲವನ್ನು ಬಿಡಲಾಗದೆ ಈ ಎರಡರ ನಡವೆ ಸಿಲುಕಿಕೊಂಡು ಪಡುವ ಬವಣೆಯನ್ನು ಈ ವಚನವು ಹೃದಯಂಗಮವಾಗಿ ಚಿತ್ರಿಸುವ ಯತ್ನ ಮಾಡಿದೆ.

ವಿಷಯವೆಂಬ ಹಸುರನೆನ್ನಮುಂದೆ ತಂದು ಪಸರಿಸಿದೆಯಯ್ಯಾ

ಪಶುವೇನ ಬಲ್ಲುದು? ಹಸುರೆಂದೆಳೆಸುವುದು

ವಿಷಯರಹಿತನ ಮಾಡಿ, ಭಕ್ತಿ ರಸವ ದಣಿಯೆ ಮೇಯಿಸಿ

ಸುಬುದ್ಧಿಯೆಂಬ ಉದಕವನೆರೆದು

ನೋಡಿ ಸಲಹಯ್ಯಾ ,ಕೂಡಲಸಂಗಮದೇವಾ.

(ಬ.ವ.ವ.ಸಂ–೫೧)

ತನ್ನನ್ನು ಒಂದು ಪಶುವಿಗೆ ಹೋಲಿಸಿಕೊಂಡು ಪ್ರಾಪಂಚಿಕದ ಆಸೆ, ಅಮಿಷಗಳು, ತನ್ನನ್ನು ಕಾಡದಂತೆ ಬೇಡಿಕೊಳ್ಳುವ ಮುಗ್ಧ ಮನಸ್ಸು ಬಸವಣ್ಣನವರದು. ತನ್ನ ಸಿದ್ಧಾಂತಕ್ಕೆ ತನ್ನ ಸಾಮಾಜಿಕ ಸಾಧನೆಗೆ ತನ್ನ ವ್ಯಕ್ತಿತ್ವ ವಿಕಸನಕ್ಕೆ ಈ ಪ್ರಪಂಚದ ಆಸೆ ಆಮಿಷಗಳು ಎಲ್ಲಿ ಅಡ್ಡವಾಗಿ ನಿಂತು ತನ್ನ ಕ್ಷೀಣಿಸುತ್ತವೋ ಎಂಬ ಭಯ ಆದರ್ಶ ವ್ಯಕ್ತಿತ್ವವನ್ನು ಹೊಂದಿರುವ ವ್ಯಕ್ತಿಗೆ ಬರುವುದು ಸಹಜ. ಹಾಗೆಯೇ ಬಸವಣ್ಣನವರು ತಾವು ನಂಬಿದ ಒಂದು ಸಿದ್ಧಾಂತಕ್ಕೆ ಬದ್ದರಾಗಿಯೇ ಉಳಿದುಕೊಂಡು ಜೀವನದುದ್ದಕ್ಕೂ ಪರಸೇವೆಯನ್ನು ಪರಮಗುರಿಯಾಗಿಸಿಕೊಂಡು ನಡೆಯಬೇಕೆಂಬ ಮುಗ್ದ ಮನಸ್ಸು ಇಲ್ಲಿ ಮೂಡುತ್ತದೆ. ಭಕ್ತಿಯಲ್ಲಿ ಸಂಪೂರ್ಣ ತನ್ನನ್ನು ತಾನು ಸಮರ್ಪಿಸಿಕೊಳ್ಳುವ ವ್ಯಕ್ತಿತ್ವ ಬಸವಣ್ಣನವರದಾಗಿದೆ. ತನಗೆ ತಿಳಿದೊ,ತಿಳಿಯದೆಯೋ ಆತ್ಮಾನ್ವೇಷಣೆಗೆ ತೊಡಗಿಕೊಳ್ಳುವ ಬಸವಣ್ಣ, ತನ್ನ ಅಂತರಂಗದ ಶುದ್ದಿಗಾಗಿ ತೊಡಗಿಕೊಂಡು ಒಳ ಹೊರಗೂ ಶುದ್ದನಾಗಿ, ಜಾಗೃತ ಪ್ರಜ್ಞೆಯು ಎಚ್ಚರಗೊಂಡು ತನ್ನ ಬಗ್ಗೆ ತಾನು ಜರಿದುಕೊಂಡು ಆತ್ಮಾವಲೋಕನ ಮಾಡಿಕೊಳ್ಳುವುದು ವಿಶಿಷ್ಟ ಸ್ವಭಾವವಾಗಿದೆ. ತಾನು ಮಾಡುವ ಕಾಯಕದಲ್ಲಿ ತಾನು ನಿಮಿತ್ತ ಮಾತ್ರವೆಂದು ಬಗೆದು ಕರ್ತವ್ಯದಲ್ಲಿ ತೊಡಗಿ ತನ್ನನ್ನೆ ಮರೆತು ತಾನು ಸಣ್ಣವನೆಂಬ ಭಾವದಿಂದ ಸೇವೆ ಮಾಡುವ ದೈನ್ಯತಾ ಸ್ವಾಭಾವವು ಬಸವಣ್ಣನವರ ಹಿರಿತನವನ್ನು ತೋರಿಸುತ್ತದೆ.

ಮಾವಿನಕಾಯೊಳಗೊಂದು ಎಕ್ಕೆಯ ಕಾಯಿ ನಾನಯ್ಯಾ

ಆನು ಭಕ್ತನೆಂತೆಂಬೆ, ನಿಮ್ಮ ಶರಣರ ಮುಂದೆ ನಾಚಿಕೆಯಿಲ್ಲದೆ ?

ಕೂಡಲಸಂಗನ ಶರಣರ ಮುಂದೆ ನಾನೆಂತು ಭಕ್ತನಪ್ಪೆನಯ್ಯಾ ?

(ಬ.ವ.ವ.ಸಂಖ್ಯೆ :೩೩೩)

ಬಸವಣ್ಣ ಶರಣರಲ್ಲಿ ತನ್ನ ಕಿರಿತನವನ್ನು ಸೂಚಿಸುತ್ತಾನೆ.

ಎನ್ನಿಂದ ಕಿರಿಯರಿಲ್ಲ ,ಶಿವಭಕ್ತರಿಗಿಂತ ಹಿರಿಯರಿಲ್ಲ,

ನಿಮ್ಮ ಪಾದಸಾಕ್ಷಿ, ಎನ್ನ ಮನಸಾಕ್ಷಿ

ಕೂಡಲಸಂಗಮದೇವ.

ಎನಗಿದೆ ದಿಬ್ಯ

(ಬವ.ವ.ಸಂಖ್ಯೆ : ೩೩೫)

ಪ್ರಾಯಶ: ಬಸವಣ್ಣ ಈ ರೀತಿ ಹೇಳಿದ್ದು, ತಾನು ಮಂತ್ರಿ ಪದವಿಯಲ್ಲಿದ್ದು ಉನ್ನತವಾದ ಸ್ಥಾನದಲ್ಲಿರುವವನು ಎಂಬ ಅಭಿಮಾನದಿಂದ ಶರಣರು ಸಮಾಜದ ಜನರು ಈತನಿಂದ ಆದಷ್ಟು ದೂರ ಸರಿಯುವ ಪ್ರಯತ್ನದಲ್ಲಿದ್ದರೇನೋ ? ಇಂತಹ ಸಂದರ್ಭದಲ್ಲಿ ತಾನು ಒಬ್ಬ ಮನುಷ್ಯ ತಾನು ಮೇಲ್ಜಾತಿಯವನು ಮಂತ್ರಿ ಪದವಿಯಲ್ಲಿರುವವನು ಎಂಬ ಭೇದ ಭಾವಬೇಡ ಸಾಧನ ರಂಗದಲ್ಲಿ ಸಾಧನೆ ಮಾಡುವವರೆಲ್ಲರೂ ಶ್ರೇಷ್ಠರು ಎಂದು ಅವರೆಲ್ಲರಿಗಿಂತಲೂ ತಾನು ಕಿರಿಯವನು ಎಂದು ಹೇಳುವ ವಿನೀತ ಭಾವ ಬಸವಣ್ಣನವರದು ತನ್ನಂತಹ ಕಿರಿಯನು ಜೀವನದ ಸಾಧನೆಯಲ್ಲಿ ತಾನು ಹಿಡಿದ ದಾರಿಯಲ್ಲಿ ತಪ್ಪು ಮಾಡುವುದು ಸಾಮಾನ್ಯ ಇಂತಹ ತಪ್ಪುಗಳನ್ನು ತಿದ್ದಿ ಮುನ್ನಡೆಸೆಂದು ಮನವಿ ಮಾಡಿಕೊಳ್ಳುವುದು ಅಹಂಕಾರವನ್ನಳಿದು ತನ್ನನ್ನು ಪೂರ್ಣ ಶುದ್ಧನನ್ನಾಗಿಸುವಂತೆ ಬಸವಣ್ಣ ಪ್ರಾರ್ಥಿಸುತ್ತಾನೆ.

ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯಾ

ಒರೆಗೆ ಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯಾ

ಕಡಿಯಕ್ಕೆ ಬಡಿಯಕ್ಕೆ ತಂದೆನ್ನ ಕಡೆಯಾಣಿಯಾ ಮಾಡಿ

ನಿಮ್ಮ ಶರಣರ ಪಾದಕ್ಕೆ ತೊಡುಗೆಯ ಮಾಡಿ ಸಲಹು

ಕೂಡಲಸಂಗಮದೇವಾ

(ಬ.ವ.ವ.ಸಂ : ೨೫೧)

ಬಸವಣ್ಣ ಬಾಯಿ ಮಾತಿನ ಚಾಪಲ್ಯಕ್ಕೆ ನುಡಿದವನಲ್ಲ, ಕಂಡಂತಹ ಸತ್ಯವನ್ನು ಅನುಭವವೇದ್ಯವಾಗಿ ನುಡಿದವನು ಮತ್ತು ಅದರಂತೆ ನಡೆದವನು.ಶಿವಭಕ್ತರಿಗೆ ತಾನು ಮೆಚ್ಚುಗೆಯಾಗಬೇಕೆಂದು ನುಡಿದು ಅದರಂತೆ ಬಾಳಬೇಕೆಂಬ ಆತನ ಹಂಬಲ, ಮುಗ್ಧತೆ ತನ್ನ ತಾನರಿತುಕೊಂಡು ತನ್ನನ್ನು ಸಂಪೂರ್ಣವಾಗಿ ಸಮಾಜ ಉಪಯೋಗಿಸಿಕೊಂಡು ಉನ್ನತಿಯನ್ನು ಸಾಧಿಸಲಿ ಎನ್ನುವ ಮನೋಧೋರಣೆ ಇಲ್ಲಿ ವ್ಯಕ್ತವಾಗುವುದನ್ನು ನಾವು ಗುರುತಿಸಬಹುದಾಗಿದೆ . ಅಲ್ಲದೆ ತನ್ನ ಪ್ರಮಾಣೀಕ ಪ್ರಯತ್ನ ವನ್ನು ಯಾವುದೇ ಸಂಕಷ್ಟದ ಸ್ಥಿತಿಯಲ್ಲೂ ನಿಲ್ಲಿಸಲಾರದ ದಾರ್ಡ್ಯತೆ ತೋರುತ್ತದೆ ಅನೇಕ ಸಮಸ್ಯೆಗಳನ್ನು ತನ್ನ ಮೈಮೇಲೆ ಎಳೆದುಕೊಂಡು ತನ್ನನ್ನು ತಾನು ಸರ್ವ ಸಮರ್ಪಣಭಾವದಿಂದ ಅರ್ಪಿಸಿಕೊಳ್ಳುವುದು ಗಮನೀಯ ವ್ಯಕ್ತಿತ್ವವಾಗಿದೆ. "ನಿಮ್ಮ ಶರಣರ ಪಾದಕ್ಕೆ ತೊಡುಗೆಯ ಮಾಡಿ ಸಲಹು"

ನೀರ ಕಂಡಲ್ಲಿ ಮುಳುಗವರಯ್ಯಾ
ಮರನ ಕಂಡಲ್ಲಿ ಸುತ್ತುವರಯ್ಯಾ
ಬತ್ತುವ ಜಲವ, ಒಣಗುವ ಮರನ
ಮಚ್ಚಿದವರು, ನಿಮ್ಮನೆತ್ತ ಬಲ್ಲರು ?
ಕೂಡಲ ಸಂಗಮದೇವಾ



(ಬ.ವ.ವ.ಸಂ; ೫೮೦)

ಬಸವಣ್ಣನವರು ತಮ್ಮ ವಚನದಲ್ಲಿ ತೀಕ್ಷ್ಣವಾದ ರೀತಿಯಲ್ಲಿ ಅಂದಿನ ಸಮಾಜವು ನಂಬಿದ್ದ ಅಂದಕಾರ, ಮೂಢನಂಬಿಕೆ , ಅಂಧಶ್ರದ್ದೆಯನ್ನು ವಿರೋದಿಸಿ ಹಲವು ದೈವಗಳನ್ನು ಪೂಜಿಸುವುದನ್ನು ವಿರೋದಿಸಿ ಶೋಷಣೆ ಮಾಡುವ ಪುರೋಹಿತ ವರ್ಗವು ತಮ್ಮ ಹಿತಕ್ಕಾಗಿ ಹುಟ್ಟು ಹಾಕಿದ ಒಣ ಸಂಪ್ರದಾಯದ ವಿರುದ್ದ ಸೆಟೆದು ನಿಲ್ಲುವ ಪ್ರಯತ್ನ ಮಾಡಿ, ಸಂಪ್ರದಾಯಶೀಲರ ಬೆನ್ನೆಲುಬಂತಿದ್ದ, ನೂರಾರು ಕ್ಷುದ್ರ ದೇವತೆಗಳನ್ನು ತರಾಟೆಗೆ ತೆಗೆದುಕೊಂಡು ಸಾಮಾಜಿಕ ಜಾಗೃತಿ ಮೂಡಿಸುವ ಕಾರ್ಯಕ್ಕೆ ತೊಡಗುತ್ತಾನೆ. ಯಾವುದೇ ಒಬ್ಬ ವ್ಯಕ್ತಿಯು ಒಂದು ಸಂಪ್ರದಾಯಕ್ಕೆ ಕಟ್ಟುಬಿದ್ದ, ಜನಸಮುದಾಯವನ್ನು ಒಟ್ಟುಗೂಡಿಸಿ ಮತ್ತೊಂದು ಸಂಸ್ಕೃತಿ ಅಥವಾ ಸಂಪ್ರದಾಯಕ್ಕೆ ಜೋಡಿಸುವ ಕೆಲಸವು ಬಹಳ ಪ್ರಯಾಸಕರವಾದ ಸಂಗತಿ, ಬಸವಣ್ಣ ಪುರಾತನವಾದ ಸಂಪ್ರದಾಯಕ್ಕೆ ವಿರುದ್ದವಾಗಿ ಸೆಟೆದು ನಿಂತು ಅಲ್ಲಿನ ಸಮಾಜಕ್ಕೆ ಬಡಿದುಕೊಂಡಿದ್ದ ರೋಗಕ್ಕೆ ಏಕದೇವೋಪಾಸನೆಯ ಔಷಧಿಯನ್ನು ನೀಡುವುದರ ಮೂಲಕ ಯಾವುದೇ ವ್ಯಕ್ತಿಗಳಿಗಾಗಲಿ, ಸಂಪ್ರದಾಯಕ್ಕಾಗಲಿ, ಹೆದರದೆ ಅಲ್ಲಿನ ದ್ವಂದ್ವಗಳನ್ನು, ಅಲ್ಲಿನ ಸಂಸ್ಕೃತಿಯನ್ನು ವಿರೋಧಿಸುವುದು ಸುಲಭದ ಕೆಲಸವಲ್ಲ ಇಂತಹ ಕಾರ್ಯಕ್ಕೆ ಕೈ ಹಾಕಿ ಬಸವಣ್ಣನವರು ಯಶಸ್ವಿಯಾಗ ಬಯಸುತ್ತಾನೆ. ಇದರಿಂದ ಬಸವಣ್ಣ ತಾನು ನಂಬಿದ್ದ ಪರಮೋಚ್ಛ ದೈವವನ್ನು ತೋರಿಸುವ ಮೂಲಕ ಏಕದೇವೋಪಾಸನೆ ಇಷ್ಟಲಿಂಗ ನೀಡುವುದು ತನ್ನ ಅನುಭವವೇದ್ಯವಾದ ವಚನಗಳನ್ನು ಯಾವ ನಿರ್ಬಿಡೆ ಇಲ್ಲದೆ ಯಾರ ಹಂಗಿಲ್ಲದೆ ವಸ್ತುನಿಷ್ಟವಾಗಿ ಹೇಳುತ್ತಾ ಹಲವು ಅನೇಕ ಸಮಸ್ಯೆಗಳನ್ನು ಮೈಮೇಲೆ ಎಳೆದುಕೊಂಡು ಅವುಗಳಿಗೆ ಹೆದರದೆ ತಲೆ ಬಾಗದೆ ತನ್ನ ದಾರಿಯಲ್ಲೆ ತಾನು ಮುನ್ನಡೆಯುವವನಾಗಿದ್ದಾನೆ. ಬಸವಣ್ಣ ನಂಬಿದ್ದ ಅನುಸರಿಸುತ್ತಿದ್ದ ಸಾತ್ವಿಕ ಸ್ವರೂಪದ ದೈವವನ್ನು ಭಕ್ತಿ ಮಾರ್ಗವನ್ನು ಇದನ್ನು ಪಡೆಯಲು ಅವನು ಅನುಸರಿಸಿದ್ದು, ಹಾಗೂ ಸೂಚಿಸಿದ್ದು, ನಿರ್ಮಲ ಮನಸ್ಸು ಹಾಗೂ ಶುದ್ದ ಭಕ್ತಿ ಜೀವನವನ್ನು. ಅದರಂತೆ ಆತನ ಸರಳ ಹಾಗೂ ಸಾಮಾಜಿಕ ವಾದ ಸಾಮಾನ್ಯ ಸೂತ್ರಗಳನ್ನು ಕಾಣುವ ಸಪ್ತಶೀಲವನ್ನು ಸಾರುವ ವಚನವಾಗಿದೆ.

ಕಳಬೇಡ, ಕೊಲಬೇಡ,
ಹುಸಿಯ ನುಡಿಯಲು ಬೇಡ,
ತನ್ನ ಬಣ್ಣಿಸಬೇಡ, ಮುನಿಯಬೇಡ

ಅನ್ಯರನು ಕಂಡು ಅಸಹ್ಯಪಡಬೇಡ.

ಇದಿರ ಹಳಿಯಲುಬೇಡ.

ಇದೆ ಅಂತರಂಗಶುದ್ಧಿ,

ಇದೇ ಬಹಿರಂಗ ಶುದ್ಧಿ,

ಇದೇ ನಮ್ಮ ಕೂಡಲಸಂಗಮದೇವನ ಒಲಿಸುವ ಪರಿ.

ಇಡೀ ಸಮಾಜವನ್ನು ಸಾತ್ವಿಕ ಶಕ್ತಿಯಿಂದ ಒಟ್ಟುಗೂಡಿಸಿ, ಶುದ್ಧಜೀವನ ನಿರ್ಮಲ ಮನಸ್ಸಿನಿಂದ ಇದ್ದಾಗ ಮಾತ್ರ ಸಾಮಾಜಿಕವಾಗಿ, ಧಾರ್ಮಿಕವಾಗಿ, ಶಾಂತಿ ಸಾಧ್ಯ ಎಂಬ ಮಾತು ಒಂದು ಆದರ್ಶ ಸಮಾಜದ ಚೌಕಟ್ಟನ್ನು ಬಸವಣ್ಣ ಸಮಾಜಕ್ಕೆ ನೀಡುತ್ತಾನೆ. ವ್ಯಕ್ತಿ ಸಾಮಾಜಿಕವಾಗಿ ಉನ್ನತ ಸ್ಥಾನಕ್ಕೇರಲು ನೈತಿಕವಾಗಿ ವ್ಯಕ್ತಿತ್ವವನ್ನು ವೃದ್ಧಿಗೊಳಿಸಿಕೊಳ್ಳಲು ಸರಳವಾದ ಭಕ್ತಿ ಮಾರ್ಗವನ್ನು ಹೇಳಿದ. ದೊಡ್ಡ ದೊಡ್ಡ ಪುರಾಣ, ಆಗಮಶಾಸ್ತ್ರಗಳನ್ನು ಓದಲಾಗದ ಸಾಮಾನ್ಯ ಮನುಷ್ಯನಿಗೆ ಜ್ಞಾನ ಮಾರ್ಗಬಿಟ್ಟು, ಇಂತಹ ಅಪಾರ ಜ್ಞಾನವನ್ನು ನೀಡುವ ವಚನಗಳು ಸಾಮಾಜಕ್ಕೆ ಉಪಯುಕ್ತವಾದವುಗಳಾಗಿವೆ. ಇದರಿಂದ ಅಂದಿನ ಶರಣರ ಚಳುವಳಿ ಹೊಸ ಕ್ರಾಂತಿಗೆ ಅಣಿಗೊಂಡು ಸಮಾಜದ ಸುಧಾರಣೆಗಾಗಿ ತೊಡಗುತ್ತದೆ. ಸಾಮನ್ಯ ಜನರಿಗೆ ದೂರವಾಗಿದ್ದ ದೇವರ ಕಲ್ಪನೆ ನೆಮ್ಮದಿಯ ಜೀವನ ಈ ಚಳುವಳಿಯಿಂದ ಹತ್ತಿರವಾಗುತ್ತಾ ಜನರ ಬದುಕಿನಲ್ಲಿ ಭರವಸೆಯನ್ನು ಸಾಮಾನ್ಯರಿಂದ ಹಿಡಿದು ಕೆಳಸ್ತರದ ಜನರವರೆಗೂ ಕಾಣತೊಡಗಿರಬೇಕೆಂದೆನಿಸುತ್ತದೆ. ಬಸವಣ್ಣ ಕೇವಲ ಒಬ್ಬ ಮಾತುಗಾರನಾಗಲಿಲ್ಲ, ನಡೆದಂತೆ ನುಡಿದು, ನುಡಿದಂತೆ ನಡೆದು, ಅನುಭಾವಿಯಾಗಿದ್ದಾನೆ. ಅವನ ಮಾತು ಕೃತಿಗಳ ವರ್ಚಸ್ಸು ಎಂತಹವರನ್ನು ಆಕರ್ಷಿಸಬಲ್ಲವಾದ್ದರಿಂದ ಕಲ್ಯಾಣದ ಮಹಾನಗರವನ್ನು ತನ್ನ ಕಾರ್ಯಕ್ಷೇತ್ರವಾಗಿಸಿಕೊಂಡು ಇಡೀ ಭಾರತದ ಮೂಲೆ ಮೂಲೆಗೂ ಭಕ್ತಿಯ ಮಾರ್ಗವನ್ನು ಪಸರಿಸತೊಡಗಿದರು. ಇವನ ಈ ಕ್ರಾಂತಿಯ ಪರಿಣಾಮವಾಗಿ ಇಡೀ ಜಗತ್ತಿಗೆ ಒಂದು ಆದರ್ಶ ಸಮಾಜದ ಕಲ್ಪನೆಯು ದೊರೆತಿದೆ ಎಂದರೆ ತಪ್ಪಿಲ್ಲ. ಯಾವುದೇ ಹಮ್ಮು ಬಿಮ್ಮುಗಳಲ್ಲಿ ತಾನೋಬ್ಬ ಸಾಮಾನ್ಯ ಮನುಷ್ಯನಾಗಿ ಸಮಾಜವನ್ನು ಸಾಮಾನ್ಯ ಜನರನ್ನು ಮಾನವರಂತೆ ಕಾಣುವ ಮಹಾಮಾನವೀಯ ವ್ಯಕ್ತಿತ್ವ ಬಸವಣ್ಣನವರದಾಗಿದೆ.

**ಕೊನೆ ಟಿಪ್ಪಣಿ**

೧. ಡಾ. ಪಿ.ವಿ. ನಾರಾಯಣರ ವಚನ ಸಮಗ್ರ ಕೃತಿಯಿಂದ ಸಂಪೂರ್ಣ ಮಾಹಿತಿಯನ್ನು ಪಡೆಯಲಾಗಿದೆ. ಪುಟ–೪೫೧–೪೫೨

## ಅಧ್ಯಾಯ ೫

# ಬಸವಣ್ಣನವರ ವಚನಗಳಲ್ಲಿ ಅಂತರಂಗ ಶೋಧದ ಸ್ವರೂಪ

ಬಸವಣ್ಣನವರ ನೇತೃತ್ವದ ಶಿವಶರಣರ ವಚನ ಚಳುವಳಿ, ಕರ್ನಾಟಕದ ಚರಿತ್ರೆಯಲ್ಲಿ ಕನ್ನಡ ಸಾಹಿತ್ಯದಲ್ಲಿ ಒಂದು ಅಪೂರ್ವ ಘಟನೆ ವಚನಗಳ ರಚನೆ ಒಂದು ಹೊಸ ಪ್ರಯೋಗ ಹನ್ನೆರಡನೆಯ ಶತಮಾನದ ಸಮಾಜದ ಎಲ್ಲ ವರ್ಗಗಳ, ವರ್ಣಗಳ ಜನಸಮುದಾಯದ ಏಳಿಗೆಗಾಗಿ ಬಸವಣ್ಣನವರ ನಾಯಕತ್ವದಲ್ಲಿ ನಡೆದ ಸಮಾಜಕಲ್ಯಾಣ, ಮಾನವ ಕಲ್ಯಾಣ ಆಂದೋಲನದ ಫಲವೆಂಬಂತೆ ವಚನಗಳು ರಚನೆಗೊಂಡು ಇಡೀ ಪ್ರಪಂಚದ ಸಾಹಿತ್ಯದಲ್ಲಿ ತನ್ನದೇ ಮಹತ್ವವನ್ನು ಪಡೆದವುಗಳಾಗಿವೆ. ಜಾಗತೀಕ ಜಗತ್ತಿನಲ್ಲಿ ವೈಚಾರಿಕತೆಯ ಭಾಗವೆನಿಸಿವೆ.

ವಚನಗಳಿಗೆ ಹಲವು ಆಯಾಮಗಳಿದ್ದು ವಿವಿಧ ದೃಷ್ಟಿಕೋನಗಳಿಂದ ನೋಡಬಹುದಾಗಿದೆ. ಇಂತಹ ವಚಗಲಲ್ಲಿ ಬಸವಣ್ಣನವರ ವಚನಗಳು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದಂತಹವುಗಳಾಗಿವೆ. ಪ್ರಸ್ತುತ ವೈಯುಕ್ತಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ, ಆರ್ಥಿಕವಾಗಿ ಅಧ್ಯಯನ ಮಾಡಲಾಗಿದೆ.

ಬಸವಣ್ಣನವರದು ಹಲವು ಪ್ರತಿಭೆಯುಳ್ಳ ವ್ಯಕ್ತಿತ್ವ ಕರ್ನಾಟಕದ ಸಮಾಜವು ಎಂದೂ ಮರೆಯಲಾಗದ ವ್ಯಕ್ತಿ ಸಮಾಜೋಧಾರ್ಮಿಕ, ರಾಜಕೀಯ,ಆರ್ಥಿಕ ಚಇಂತನೆಯ ಮೂಲಕ ತನ್ನ ತನವನ್ನು ಗುರುತಿಸಿಕೊಂಡು, ಸಾಮಾಜಿಕ ಚಳುವಳಿಯನ್ನು ಮಾಡಿ ಸಮಾಜದ ಸುಧಾರಣೆ ಮಾಡಿದ ಮಹಾವ್ಯಕ್ತಿಯಾಗಿ ತನ್ನನ್ನು ಪ್ರತ್ಯೇಕಿಸಿಕೊಳ್ಳದೆ ಸಮಾಜಕ್ಕೆ ತನ್ನನ್ನು ತನ್ನ ಇಷ್ಟಲಿಂಗಕ್ಕೆ ಮನವನ್ನು ನಿವೇದಿಸಿಕೊಂಡಿರುವ ಮಹಾಚೇತನದ ವ್ಯಕ್ತಿತ್ವ ಬಸವಣ್ಣನವರದಾಗಿದೆ.

ಡಾ॥ ಲಿಂಗದೇವರು ಹಳೆ ಮನೆಯವರು ಹೇಳುವಂತೆ "ಬಸವಣ್ಣ ಅಸಂಖ್ಯಾತ ಜನರ ಮನಸ್ಸಿನಲ್ಲಿ, ಕಣ್ಣಿನಲ್ಲಿ ದರ್ಶನದಲ್ಲಿ ಅನೇಕ ರೀತಿಯ ಪ್ರಾತಿನಿಧ್ಯ ಪಡೆದಿದ್ದಾನೆ. ಭಕ್ತಿ

ಬಂಢಾರಿಯಾಗಿ ಜಗಜ್ಯೋತಿಯಾಗಿ, ಅಣ್ಣನಾಗಿ, ವಿಶ್ವಮಾನವನಾಗಿ, ಸಮಾಜ ಸುಧಾರಕನಾಗಿ, ಕಾಯಕನಿಷ್ಠನಾಗಿ, ಸಮಾನತೆಯ ಹರಿಕಾರನಾಗಿ ಸಾಕ್ಷಾತ್ಕಾರಗೊಂಡಿದ್ದಾನೆ. ಇನ್ನು ಕೆಲವರಿಗೆ ಬೆಲೆಬಾಳುವ ಪೋಷಾಕು ಹಾಕಿಕೊಂಡು ಕುದುರೆ ಹತ್ತಿ ಕುಳಿತ ಬಿಜ್ಜಳನ ಪ್ರಧಾನ ಮಂತ್ರಿಯಾಗಿ, ಕೂಡಲಸಂಗಮನನ್ನು ಪೂಜಿಸುವ ಶರಣನಾಗಿ ಮೂರ್ತಿ ಕರಣಗೊಂಡಿದ್ದಾನೆ. ಇವರೆಲ್ಲರ ಕಾಣ್ಕೆಯಲ್ಲಿ ಅವನೊಬ್ಬ ಮಲರಹಿತನಾದ, ಮಾಯಾರಹಿತನಾದ, ಸರ್ವದೋಷಿರಹಿತನಾದ ಪರಿಪೂರ್ಣ ವ್ಯಕ್ತಿಯಾಗಿ ತನು, ಮನ, ಧನಗಳ ನೆಲೆಯಲ್ಲಿ ಸರ್ವಾಂಗ ಸುಂದರನಗಿ ಪಡಿಮೂಡಿದ್ದಾನೆ" ಸಮಾಜದ ಸಾಮಾನ್ಯ ಜನರು ಬಸವಣ್ಣನನ್ನು ಗುರುತಿಸಿರುವಂತೆ ಆತನ ರೂಪ ಮತ್ತು ವ್ಯಕ್ತಿತ್ವವನ್ನು ಕಂಡು ಆಶ್ಚರ್ಯ ಮತ್ತು ಅಪಾರ ಮೆಚ್ಚುಗೆ ಉಂಟಾಗುವುದಲ್ಲದೆ ಆತನ ವ್ಯಕ್ತಿತ್ವವು ಆತನ ಹೋರಾಟದ ಸ್ವರೂಪವು ಸ್ಪಷ್ಟವಾಗುತ್ತದೆ.

## ನಿವೇದನೆ

ಹನ್ನೆರಡನೆಯ ಶತನಮಾನದ ಶರಣರ ಸಮಾಜೋಧಾರ್ಮಿಕ ಚಳುವಳಿಗೆ ಕಾರಣ ಹಲವು ಆದರೆ ಇಂತಹ ಚಳುವಳಿಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದ ಶರಣರದು. ಒಬ್ಬೊಬ್ಬರದು ಒಂದೊಂದು ವೈಶಿಷ್ಠಪೂರ್ಣ ವ್ಯಕ್ತಿತ್ವ ಮತ್ತು ತತ್ವವಾಗಿದೆ. ಆದರೆ ಅವರೆಲ್ಲರ ಆಶಯ ಮಾತ್ರ ಒಂದೇ ಆಗಿದ್ದಿತು. ಅದು ಆದರ್ಶ ಸಮಾಜದ ಕಲ್ಪನೆ, ಸಮಾಜ ಕಲ್ಯಾಣ, ವ್ಯಕ್ತಿ ಕಲ್ಯಾಣ ಮುಂತಾದವುಗಳನ್ನು ಗುರುತಿಸಬಹುದಾಗಿದೆ. ಈ ಚಳವುಳಿಯ ನಾಯಕತ್ವವನ್ನು ವಹಿಸಿಕೊಂಡಿರುವ ವ್ಯಕ್ತಿ ಬಸವಣ್ಣನಾಗಿದ್ದು ಈತನದು ಒಂದು ವಿಶಿಷ್ಟ ವ್ಯಕ್ತಿತ್ವವಗಿದೆ. ಬಸವಣ್ಣ ತನ್ನನ್ನು ತಾನು ಸಂಪೂರ್ಣವಾಗಿ ನಿವೇದಿಸಿಕೊಂಡಿರುವಂತನಗಿದ್ದಾನೆ.

ಒಂದು ಚಳುವಳಿಯ ಹೋರಾಟದ ನಾಯಕತ್ವವನ್ನು ವಹಿಸಿಕೊಂಡವರು ತಮ್ಮ ಹಿತವನ್ನೇ ಮರೆತು ಇಡೀ ಸಮಾಜದ ಹಿತಕ್ಕಾಗಿ ಹಗಲಿರುಳು ಶ್ರಮಿಸಬೇಕಾಗುತ್ತದೆ. ಈ ದಿಶೆಯಲ್ಲಿ ಬಸವಣ್ಣ ಒಂದು ಹೊಸ ಸಮಾಜವನ್ನು ಕಟ್ಟಬೇಕೆಂದು ತನ್ನ ಸುಖವನ್ನೇ ತ್ಯಾಗಮಾಡಿ ತನ್ನ ಸ್ವಂತಿಕೆಯನ್ನೇ ಮರೆತು ಈ ಶರಣರ ಹೋರಾಟದಲ್ಲಿ ಭಾಗವಹಿಸಿ ಕನಸಿನ ಕೋಟೆಯನ್ನು ನಿರ್ಮಿಸಬಯಸುತ್ತಾನೆ. ಬಸವಣ್ಣನನ್ನು ಕೇವಲ ಒಬ್ಬ ಸಮಾಜಿಕ ಹೋರಾಟಗಾರ ಎಂದು ಕರೆಯಲೂಬಹುದು. ಏಕೆಂದರೆ ತನ್ನ ಆತ್ಮದ ಶುದ್ಧಿಗಾಗಿ ಜೊತೆಗೆ ಸಮಾಜದ ಶುದ್ಧಿಯನ್ನು ಮಾಡುತ್ತಾನೆ. ಅಂತರಂಗ ಮತ್ತು ಬಹಿರಂಗವನ್ನು ಶುದ್ಧೀಕರಿಸುತ್ತಾರನೆ. ಪ್ರಪಂಪಚದ ಅನೇಕ ಮಹನೀಯವರನ್ನು ನೋಡಿದಾಗ ಅವರು ಯಾವುದೇ ಒಂದು ಕ್ಷೇತ್ರದಲಿ ತಮ್ಮನ್ನು ತೊಡಗಿಸಿಕೊಂಡು ಸಾಧನೆ ಮಾಡಿರುವುದುನ್ನು ಕಾಣುತ್ತೇವೆ. ಆದರೆ

ಬಸವಣ್ಣನವರು ಸಾಮಾಜಿಕ ರಂಗದಲ್ಲಿ, ಧಾರ್ಮಿಕ ರಂಗದಲ್ಲಿ, ಆಧ್ಯಾತ್ಮಿಕ ನೆಲೆಯಲ್ಲಿ, ಸಾಹಿತ್ಯ ಕ್ಷೇತ್ರದಲ್ಲಿ ಹೀಗೆ ಹಲವು ಕ್ಷೇತ್ರದಲ್ಲಿ ತನನ್ನು ತೊಡಗಿಸಿಕೊಂಡು ಸಾಧನೆ ಮಾಡಿದಂತಹ ಮಹಾ ವ್ಯಕ್ತಿಯಾಗಿದ್ದಾನೆ. ಬಸವಣ್ಣ ತನ್ನನ್ನು ಇಡೀ ಸಮಾಜಕ್ಕೆ ತನು-ಮನ-ಧನವನ್ನು ಸರ್ವ ಸಮರ್ಪಣ ಭಾವದಿಂದ ನಿವೇದಿಸಿಕೊಂಡವನಾಗಿದ್ದಾನೆ.

## ವೈಯಕ್ತಿಕವಾಗಿ

೧೨ನೇ ಶತಮಾನದ ಸಾಮಾಜಿಕ ಸ್ಥಿತಿಯನ್ನು ಕಂಡು ಬಸವಣ್ಣನವರು ಕುರುಡನಂತೆ ಕೂಡಲಿಲ್ಲ ಅಲ್ಲಿ ನಡೆಯುತ್ತಿದ್ದ ಅನ್ಯಾಯ,ಅಲ್ಲಿನ ಕೆಳಸ್ಥರದ ಜನರ ಹೀನಾಯಸ್ಥಿತಿಯನ್ನು, ಶೋಷಣೆ ಮಾಡುವುದೇ ವೃತ್ತಿಯನ್ನಗಿಸಿಕೊಂಡಿದ್ದ ಸನಾತನವಾದಿಗಳ ವಿರುದ್ಧ ಜನಕಲ್ಯಾಣಕ್ಕಾಗಿ, ಮಾನವೀಯ ಮೌಲ್ಯಗಳ ಪನರ್ ನಿರ್ಮಾಣಕ್ಕಾಗಿ ಹೋಟಾಕ್ಕಿಳಿದರು. ಇಂತಹ ಹೋರಾಟದ ಫಲವೆಂಬಂತೆ ತನ್ನ ಅನುಭವ ವೇದ್ಯವಾದ ವಚನಗಳು ರಚನೆಗೊಂಡವು. ಬಸವಣ್ಣ ವಚನಗಳನ್ನು ಜನರಿಗೆ ಉಪದೇಶ ಮಾಡುವುದಕ್ಕೆ ರಚಿಸಲಿಲ್ಲ, ತಾನು ಕಂಡುಂಡ ಸತ್ಯವನ್ನು ಸಾರಿ ಹೇಳಿ ಸಾಮಾಜಿಕ ಸಮಾನತೆಯನ್ನು, ಧಾರ್ಮಿಕ ಬದಲಾವಣೆಯನ್ನು ಕಾಣಬೇಕೆಂದುರು ರಚಿಸಿದುದ್ದಲ್ಲದೆ ಒಂದು ಉನ್ನತವಾದ ಸಮಾಜದ ನಿರ್ಮಾಣಕ್ಕೆ ಮಾರ್ಗದರ್ಶನದ ರೂಪವಾಗಿ ವಚನಗಳು ಹುಟ್ಟಿಬಂದವುಗಳಾಗಿವೆ. ಸಮಾಜ ಸುಧಾರಣೆಗಳೀಗಾಗಿ ಹೋರಾಟಕ್ಕಿಳಿದ ಬಸವಣ್ಣ ಸಮಾಜಕ್ಕೆ ಆದರ್ಶವಿರುವಂತಹ ವಚನಗಳಷ್ಟನ್ನೇನು ರಚಿಸಲಿಲ್ಲ. ತನ್ನ ವೈಯುಕ್ತಿಕವಗಿ ಆತ್ಮಶುದ್ಧಿಗಾಗಿ, ಆತ್ಮಾನ್ವೇಷಣೆ ಮಾಡಿಕೊಳ್ಳುವಂತಹ, ಅಂತರಂಗವನ್ನು ಶುದ್ಧಿಗೊಳಿಸಿಕೊಳ್ಳುವಂತಹ, ತನ್ನ ವ್ಯಕ್ತಿತ್ವ ವಿಕಸನಮಾಡಿಕೊಳ್ಳುವಂತಹ ವಚನಗಳನ್ನುರಚಿಸಿದ್ದದನ್ನು ನೋಡಬಹುದಾಗಿದೆ. ಬಸವಣ್ಣ ತಾನೊಬ್ಬ ಕವಿ, ತಾನು ರಚಿಸುತ್ತಿರುವುದು ಶ್ರೇಷ್ಠ ಸಾಹಿತ್ಯ ಎಂಬ ಕಲ್ಪನೆಯಿಂದ ವಚನಗಳನ್ನುರಚಿಸದೆ ತನ್ನ ಚಳುವಳಿಯ ಹೋರಾಟದ ಸಾಧನ ಮಾರ್ಗಗಳನ್ನಾಗಿ ವಚನಗಳನ್ನು ಬಳಸಿಕೊಂಡವನಾಗಿದ್ದಾನೆ. ಡಾ. ರಹಮತ್ ತರೀಕೆರೆಯವರು ಹೇಳುವಂತೆ "ಬಸವಣ್ಣ ಕಾರ್ಲ್ ಮಾರ್ಕ್ಸ್‌ನಂತೆ ಅಥವಾ ಯಾವುದೋ ತತ್ವಜ್ಞಾನಿಯಂತೆ ತನ್ನ ಸಿದ್ಧಾಂತಗಳನ್ನು ತರ್ಕಬದ್ಧವಾಗಿ ವೈಜ್ಞಾನಿಕವಾಗಿ ಮಂಡಿಸಲಿಲ್ಲ. ತಾನೊಬ್ಬ ಧಾರ್ಮಿಕ, ಸಾಮಾಜಿಕ ಹೋರಾಟಗಾರನಾಗಿ, ಒಬ್ಬ ಕವಿಯಾಗಿ ವಚನಗಳನ್ನು ರಚಿಸಿದನು. ಈ ವಚನಗಳು ಕಲ್ಯಾಣದ ಅವನ ಬದುಕಿನ ವಿಭಿನ್ನ ಸಂದರ್ಭಗಳಲ್ಲಿ ಆ ಸಂದರ್ಭಕ್ಕೆ ಪ್ರತಿಕ್ರಿಯೆಯಾಗಿ ರಚನೆಯಾದವು.ತಪ್ಪು ಮಾಡುತ್ತ ತನ್ನ ಸಂಗಾತಿಗಳಿಂದ ಕಲಿಯುತ್ತಾ ಬೆಳೆದ ವಿನಯವಂತಿಕೆ ಇರುವ ಬಸವಣ್ಣನ ಬೆಳವಣಿಗೆಯ ಭಾಗವಾಗಿ ಹುಟ್ಟಿದವು. ಹೀಗಾಗಿ ಅವುಗಳಲ್ಲಿ ಇರುವುದು

ತತ್ವಶಾಸ್ತ್ರದ ಕೃತಿಯಲ್ಲ, ಆದಿಯಿಂದ ತುದಿಯತನಕ ಇರುವಂತಹ ಸುಸಂಬದ್ಧವಾದ ಚಿಂತನೆಯಲ್ಲ, ಅವುಗಳಲ್ಲಿ ಪರಸ್ಪರ ಭಿನ್ನದನಿಗಳಿವೆ, ವೈರುದ್ಧಗಳಿವೆ"

ಬಸವಣ್ಣನವರ ವಚನಗಳಲ್ಲಿ ಅನೇಕ ವೈರುದ್ಯಗಳು,ದಂದ್ವಗಳು, ಭಿನ್ನದಿನಗಳಿದ್ದರು ತನ್ನ ತತ್ವಸಿದ್ಧಾಂತಕ್ಕೆ ಬದ್ಧನಾಗಿ ಹೋರಾಟದ ಕಣ್ಣಕ್ಕಿಳಿದು ಸೆಣಸಾಡುತ್ತಾನೆ. ಬಸವಣ್ಣ ತನ್ನ ವೈಯುಕ್ತಕತೆಯನ್ನು ಸಂಪೂರ್ಣವಾಗಿ ತ್ಯಜಿಸಲು ಸಾಧ್ಯವಾಗದೆ, ಇತ್ತ ತನ್ನ ನಿಷ್ಠೆ ನಿಯತ್ತನ್ನು ಬಿಡಲು ಸಾಧ್ಯವಾಗದೆ, ನೋವನ್ನು ಅನುಭವಿಸುತ್ತಾನೆ. ಆದರೆ ಇದಕ್ಕೆ ಹೆದರದೆ ಮುನ್ನುಗ್ಗುವ ಸ್ವಭಾವವು ವಿಶಿಷ್ಟವಾದುದಾಗಿದೆ ಎಂದೇ ಹೇಳಬಹುದು.

ಬಸವಣ್ಣ ಅಂತರಂಗದ ಶೋಧನೆಗೆ ತೊಡಗಿಕೊಂಡು ತನ್ನನ್ನು ತಾನೇ ಓರೆಗೆ ಹಚ್ಚಿ ತಿಕ್ಕಿಕೊಳ್ಳುತ್ತಾನೆ. ಮಹಾಮನೆ ಯಲ್ಲದ ಶರಣರ ಸಮಾಜದ ಎಲ್ಲ ವರ್ಗದ ಜನರ ಪ್ರೀತಿ ವಾತ್ಸಲ್ಯಕ್ಕೆ ಪಾತ್ರನಾಗಿದ್ದರು ತಾನು ಮಾಡುವುದು ಕೇವಲ ಕಾಯಕ ತಾನು ನಿಮಿತ್ತ ಮಾತ್ರವೆಂದು ಹೇಳುವ ಇಂಡೀ ಪ್ರಪಂಚದ ಆಸೆ, ಆಮಿಷಗಳು ತನ್ನನ್ನು ಕಾಡಿದಿರಲೆಂಬ ಮುನ್ನಚ್ಚೆರಿಕೆಯ ಭಾವವು ಆತನಲ್ಲಿ ಸದಾ ಜಾಗೃತವಗಿರುವುದನ್ನು ನಾವು ನೋಡಬಹುದಾಗಿದೆ.

ಎನ್ನ ಚಿತ್ತವು ಹತ್ತಿಯಹಣ್ಣು, ನೋಡಯ್ಯ,

ವಿಚಾರಿಸಿದಡೆ ಏನೂ ಹುರುಳಿಲ್ಲಯ್ಯ,

ಪ್ರಪಂಚದ ಡಂಬಿನಲ್ಲಿ ಎನ್ನನೊಂದು ರೂಪುಮಾಡಿ ನೀವಿರಿಸದಿರಿ

ಕೂಡಲಸಂಗಮದೇವಾ

ಬ.ವ.ವ.ಸಂ–೨೬

ತನ್ನ ಚಿತ್ತವನ್ನು ಹತ್ತಿಯಹಣ್ಣಿಗೆ ಹೋಲಿಸಿಕೊಂಡು ತನ್ನ ಮನದಲ್ಲಿರುವ ತಳಮಳ ,ತುಡಿತ ಮಿಡಿತಗಳನ್ನು ಯಾವ ಸಂಕೋಚವಿಲ್ಲದೆ ಹೊರಹಾಕುವ ಪ್ರಯತ್ನ ಮಾಡುತ್ತಾನೆ. ಬಸವಣ್ಣ ತನ್ನನ್ನು ಹತ್ತಿಯ ಹಣ್ಣಿನ ರೂಪಕದ ಮೂಲಕ ತನ್ನ ಮನದ ದ್ವಂದ್ವವನ್ನು ತಾನು ಶುದ್ಧನಲ್ಲ ತನಗೆ ದೊರೆತಿರುವ ಸ್ಥಾನಮಾನವು ಪ್ರಮಾಣಿಕವಾದುದಲ್ಲ. ಏಕೆಂದರೆ ಈ ಪ್ರಪಂಚದಲ್ಲಿ ತಾನು ನಿಮಿತ್ತ ಮಾತ್ರ ಇದಕ್ಕೆ ಕಾರಣ ತನ್ನ ಆರಾಧ್ಯ ದೈವವೇ ಆಗಿದೆ.ತಾನು ಪ್ರಾಮಾಣಿಕನಲ್ಲ ಎಂದು ತನ್ನ ಪ್ರಾಮಾಣಕತೆಯನ್ನು ಇಮ್ಮಡಿಗೊಳಿಸಿಕೊಳ್ಳುವ ಆತ್ಮಾನ್ವೇಷಣೆ ಮಾಡಿಕೊಂಡು ಅಂತರಂಗವನ್ನು ಚೊಕ್ಕಟವಾಗಿ ಇಟ್ಟುಕೊಳ್ಳುವುದರ ಜೊತೆಗೆ ಸಮಾಜದ

ಪರಿಸ್ಥಿತಿಯು ಸುಧಾರಣೆಗೊಂಡು ತಮ್ಮ ತಮ್ಮ ಕರ್ತವ್ಯಗಳಲ್ಲಿ ತಾವು ಶುದ್ಧವಾಗಿರಬೇಕೆಂದು ತಮ್ಮ ಆಧ್ಯಾತ್ಮ ಸಾಧನೆಯಲ್ಲಿ ತನ್ನನ್ನಿರಿಸಿಕೊಳ್ಳುವ ನಿಟ್ಟಿನಲ್ಲಿ ಪ್ರಯತ್ನ ಮಾಡಬೇಕೆಂದು ಕರೆ ನೀಡುವಂತಹ ದಾನಿಯಾಗಿ ನೋಡಬಹುದಾಗಿದೆ. ಇದು ಕೇವಲ ಬಸಣ್ಣನದು ಸೋಗಿನ ರೀತಿಯಲ್ಲಿದೆ, ಕೃತಕವಾಗಿ ಹೊರಹೊಮ್ಮಿದೆ ಎಂಬ ಆರೋಪವನ್ನು ತಮ್ಮ ಮೈಮೇಲೆ ಎಳೆದುಕೊಳ್ಳುವ ವ್ಯಕ್ತಿತ್ವವಾಗಿಲ್ಲ. ತನ್ನ ಸಾಮಾಜಿಕ ಜೀವನದ ಮೇಲೆ, ಸಾಧನೆಯ ಮಾರ್ಗದ ಮೇಲೆ , ಧಾರ್ಮಿಕ ಹೋರಾಟದ ಮೇಲೆ, ತನ್ನ ಆಧ್ಯಾತ್ಮಿಕ ಮಾರ್ಗದಲ್ಲಿ ಎದುರಾದ ಸಮಸ್ಯೆಗಳು ಬಾಹ್ಯಕ್ಕಿಂತ ಹೆಚ್ಚಾಗಿ ಆಂತರಿಕವಾಗಿಯೇ ಕಾಡಿವೆ . ಬಾಹ್ಯ ಹಾಗೂ ಆಂತರಿಕ ಸಮಸ್ಯೆಗಳು ತನ್ನ ಹಾಗೂ ಸಮಾಜದ ಬೆಳವಣಿಗೆಯನ್ನು ಹೇಗೆ ಕುಂಠಿತಗೊಳಿಸಿವೆ ಎಂಬು ರೀತಿಯನ್ನು ಆತ ಯಾವ ಮುಚ್ಚುಮರೆಯಿಲ್ಲದೆ ಹೊರ ಹಾಕುವ, ಚರ್ಚಿಸುವ ರೀತಿ ಅನನ್ಯವಾದುದಾಗಿದೆ. ಪ್ರಮಾಣಿಕತೆಯ ಅನುಭವದ ಆಳದಿಂದ ಧುಮ್ಮಿಕ್ಕಿ ಹರಿಯುವ ವಚನಗಳು ಬಸವಣ್ಣನ ಅಂತರಂಗದಲ್ಲಿ ಎದ್ದಿರುವ ಕೋಲಾಹಲವನ್ನು ತುಡಿತ , ಮಿಡಿತವನ್ನು ಸ್ಪಷ್ಟವಾಗಿ ಹೊರಹಾಕುವ ಭಾವ ಆತನದು.

ಎನ್ನ ನಡೆಯೊಂದು ಪರಿ, ಎನ್ನ ನುಡಿಯೊಂದು ಪರಿ,
ಎನ್ನೊಳಗೇನು ಶುದ್ಧವಿಲಲ ನೋಡಯ್ಯ,
ನುಡಿಗೆ ತಕ್ಕ ನಡೆಯು ಕಂಡಡೆ
ಕೂಡಲ ಸಂಗಮದೇವನೊಳಗಿಪ್ಪನಯ್ಯ.

(ಬ.ವ.ವ.ಸಂ-೩೦)

ನೋಡುವರುಳ್ಳಡೆ ಮಾಡುವೆ ದೇಹಾರವ
ಎನಗೊಂದು ನಿಜವಿಲ್ಲ, ಎನಗೊಂದು ನಿಷ್ಠತಿಯಿಲ್ಲ
ಲಿಂಗವ ತೋರಿ ಉದರವ ಹೊರೆವ ಭಂಗಗಾರ ನಾನು
ಕೂಡಲ ಸಂಗಮದೇವಾ

(ಬ.ವ.ವ.ಸಂ-೩೦೭)

ಆನು ಭಕ್ತನಲ್ಲನಲ್ಲಯ್ಯ, ಆನು ವೇಷಧಾರಿಯಯ್ಯ

ಕಾಟುಗ, ಕೇತುಗ, ಪೋಲುಗ ಎಂಬುದು ಎನ್ನ ಹೆಸರು

ಕೂಡಲಸಂಗಮದೇವಾ

ನಿಮ್ಮ ಶರಣರ ಮನೆಯ ಮಗನಾನಯ್ಯ

(ಬ.ವ.ವ.ಸಂ-೩೩೬)

ಸಮಾಜ ಸುಧಾರಣೆ ಮಹಾಜವಾದ್ಬಾರಿಯೊಂದನ್ನು ಹೊತ್ತುಕೊಂಡು ನಡೆವ ಮುಗ್ಧ ಜೀವಿಯೊಂದು ತನ್ನ ಅಂತರಂಗದ ಶುದ್ಧತೆಗೆ ತೊಡಗಿಕೊಂಡಾಗ ತನ್ನ ತನವನ್ನು ಪರಿಕ್ಷೀಸಿಕೊಳ್ಳುವ ಕೆಲಸ ಮಾಡುವಾಗ ತನ್ನ ಬಗ್ಗೆ ತಾನೇ ಅಸಹ್ಯ ಭಾವನೆಗಳೊಂದಿಗೆ ತಳೆವ ನಿಲುವುಗಳಂತೆ ಬಸವಣ್ಣ ತನ್ನ ಆತ್ನ ನಿರೀಕ್ಷಣೆ ಮಾಡಿಕೊಂಡು ತಾನು ಮಾಡುವುದು ತನ್ನ ಉದರ ಪೋಷಣೆಗಾಗಿ ತಾನು ಶುದ್ಧನಲ್ಲ ತನ್ನನ್ನು ಸಮಾಜದ ಇತರರು ನೋಡಿ ತನ್ನಂತೆಯೇ ನಡೆದುಕೊಳ್ಳಬೇಕೆಂಬ ಹಂಬಲಕ್ಕೆ ತಾನೇ ವಿರೋಧಿಯಾಗಿನಿಂತು ತನ್ನ ಆಡಂಬರದ ಜೀವನವು ಇತರರಿಗೆ ಸಮಾಜದ ಜನರಿಗೆ ಸ್ಫೂರ್ತಿಯಾಗುವ ಬದಲು ಮಾರಕವಾಗಿ ಪರಿಣಮಿಸಬಹುದೇನೋ ಎಂಬ ಭಯದಲ್ಲಿ ನುಡಿಯುತ್ತಾನೆ. ತನ್ನ ಸ್ವಂತ ಅನುಭವದಿಂದ ವಚನಗಳನ್ನುರಚಿಸುತ್ತಾ, ಸಮಾಜದ ಏಳಿಗೆಗಾಗಿ ಶ್ರಮಿಸುವ ದಾರಿಯಲ್ಲಿದ್ದ ಆತನನ್ನು ತಾನು ಮಂತ್ರಿ ಪದವಿಯಲ್ಲಿರುವ ವ್ಯಕ್ತಿ, ತಾನು ಮೇಲ್ಜಾತಿಯಲ್ಲಿ ಹುಟ್ಟಿದವನು ತನ್ನ ವಿಚಾರಗಳು, ಕಲ್ಪನೆಗಳು, ಹೋರಾಟಗಳು ಉಚ್ಚಮಟ್ಟದ್ದವು ಎಂಬ ಅಹಂಕಾರವು ಮನದ ಯಾವ ಮೇಲೆಯಲ್ಲೋ ಕುಳಿತು ಕಾಡತೊಡಗಿರಬೇಕು ಆದರಿಂದ ಬಸವಣ್ಣ **"ಶರಣರ ಮನೆಯ ಮಗನೆಂದು"** ಹೇಳಿಕೊಂಡು ಅಂತಹ ಸುಳ್ಳು ಮೋಹದ ಅಂಹಕಾರ ಭಾವನೆಯನ್ನು ಇಲ್ಲವಾಗಿಸಲು ಆಂತರಿಕ ಹೋರಾಟದಲ್ಲಿ ತೊಡಗುತ್ತಾನೆ. ನುಡಿದಂತೆ ನಡೆದು ನಡೆದಂತೆ ನುಡಿವ ಶರಣರ ಸಮೂಹದಲ್ಲಿ ತಾನು ಕೆಲವು ಸಂದರ್ಭಕ್ಕೆ ಕಟ್ಟುಬೀಳುವ ಪ್ರಸಂಗ ಬಂದಾಗ ನುಡಿದ ನಡೆಯದೆ ಎಡವಿದಾಗ ಆತನ ಜಾಗೃತ ಪ್ರಜ್ಞೆ ಆತನನ್ನು ತೀವ್ರವಾಗಿ ಕಾಡಿರಬೇಕು ಅಥವಾ ನುಡಿದಂತೆ ನಡೆವ ವ್ಯಕ್ತಿ ಬಸವಣ್ಣನೆಂದು ಆತನನ್ನು ಹೊಗಳುವ ತೆಗಳುವ ಜನರ ಮಾತುಗಳಿಗೆ ಪ್ರತಿಯಾಗಿ "ನುಡಿಗೆ ತಕ್ಕ ನಡೆಯುಕಂಡಡೆ ಕೂಡಲಸಂಗಮದೇವ ನೊಳಗಿರ್ಪನಯ್ಯ" ಎಂದು ತನ್ನ ಕಾರ್ಯದಲ್ಲಿ ತನ್ನದೇನು ಇಲ್ಲ ಎಲ್ಲಾ ತನ್ನ ಆರಾಧ್ಯ ದೈವದ್ದೆ ಎಂಬ ಭಾವದಿಂದ ಸಂಪೂರ್ಣವಾಗಿ ತನ್ನನ್ನು ಅರ್ಪಣೆ ಮಾಡಿಕೊಳ್ಳುವುದು ಬಸವಣ್ಣನ ಅಂತರಂಗ ಶುದ್ಧತೆಗೆ ತೊಡಗಿಕೊಂಡು ತನ್ನ ಕಾರ್ಯದಲ್ಲಿ ತಾನೇ ಇಲ್ಲದಿರುವಂತೆ

ನೀಡಿಕೊಳ್ಳುವುದು ತನ್ನ ವೈಯುಕ್ತವಾಗಿ ನಿವೇದಿಸಿಕೊಂಡಿರುವುದೇ ಆಗಿದೆ. ಬಸವಣ್ಣನವರು ತಮ್ಮನ್ನು ಪ್ರಾಣಿ ಪಕ್ಷಿಗಳಿಗೆ, ಹಣ್ಣು ಹೂವುಗಳಿಗೆ ಹೋಲಿಸಿಕೊಳ್ಳುವುದರ ಜೊತೆಗೆ ಊಸರವಳ್ಳಿ ಬಾವುಲು, ಮುಂತಾದ ಹೀನವಾದ ಜೀವಿಗಳಿಗೆ ಹೋಲಿಸಿಕೊಂಡು ಆತ್ಮನಿಷ್ಠೆಯನ್ನು ಮಾಡಿಕೊಂಡು ಒಳ ಹೊರಗೂ ಶುದ್ಧನಾಗಿರಬೇಕೆಂದು ಹಂಬಲಿಸಿ ತಮ್ಮ ಅಂತರಂಗವನ್ನು ಪ್ರವೇಶಿಸಿ, ಅಲ್ಲಿನ ದ್ವಂದ್ವಗಳನ್ನು ನಿವಾರಿಸಿಕೊಂಡು ಅಲ್ಲಿನ ದೋಷಗಳನ್ನು ಸರಿಪಡಿಸಿಕೊಂಡು ತನ್ನತಾನರಿಯುವ ಪ್ರಯತ್ನವನ್ನು ಮಾಡುತ್ತಾರೆ. ಅವರು ತಮ್ಮ ಒಂದು ವಚನದಲ್ಲಿ ಹೇಳಿರುವಂತೆ "ಅಂತರಂಗ ಆತ್ಮ ಶುದ್ಧಿಯಿಲ್ಲದವನೆಂತು ನಂಬುನಯ್ಯ" ವ್ಯಕ್ತಿಯು ತಾನು ದೊಡ್ಡವನೆಂದು ತಾನು ಹಲವಾರು ವಿಧದಲ್ಲಿ ಸಾಧನೆ ಮಾಡಿರುವವನು. ತಾನು ತಪಸ್ವಿ ತಾನು ಅಧಿಕಾರಿ ಎಂದು ಬೀಗಿಕೊಂಡು ತಾನೇ ಶ್ರೇಷ್ಠತಮ ವ್ಯಕ್ತಿ ಇನ್ನುಳಿದವರೆಲ್ಲರು ಕನಿಷ್ಠರು ಎಂಬ ಭಾವದಿಂದ ಸಮಾಜವನವನ್ನು ನೋಡುವವರನ್ನು ಬಸವಣ್ಣ ಬಹು ಖಂಡವಾಗಿ ಖಂಡಿಸುತ್ತಾನೆ. ಆಧ್ಯಾತ್ಮಿಕವಾಗಿ, ಸಾಮಾಜಿಕವಾಗಿ ಸಾಧನೆ ಮಾಡುವ ಹಂಬಲಉಳ್ಳವರು. ತಮ್ಮ ಅಂತರಂಗವನ್ನು ಪ್ರವೇಶ ಮಾಡಿಕೊಂಡು, ಆತ್ಮನಿರೀಕ್ಷೆಯಲ್ಲಿ ತೊಡಗಿಕೊಂಡು ತನ್ನ ತಾನರಿತುಕೊಂಡು,ಸರಳವಾದ, ಸುಂದರವಾದ ಜೀವನವನ್ನು ಸಾಗಿಸಬೇಕೆಂಬ ನಿಲುವು ಇಲ್ಲಿ ಕಾಣುತ್ತದೆ. ವ್ಯಕ್ತಿಯ ಶ್ರೇಷ್ಠತೆಯು ತಿಳಿಯಲು ಆತನು ತನ್ನ ವ್ಯಕ್ತಿತ್ವದಲ್ಲಿ ಎಷ್ಟು ಶುದ್ಧನಾಗಿದ್ದಾನೆಂಬ ಮಾನದಂಡಬೇಕಾಗುತ್ತದೆ. ಆದ್ದರಿಂದ ಶರಣರಾದವರು ತಮ್ಮ ಅಂತರಂಗ ಆತ್ಮಶುದ್ಧಿಯನ್ನು ಮಾಡಿಕೊಂಡಾಗ ಮಾತ್ರ ಆದರ್ಶ ಸಮಾಜದ ನಿರ್ಮಾಣ ಸಾಧ್ಯ ಎಂಬ ಅಭಿಪ್ರಾಯ ಮಹತ್ವಪೂರ್ಣವಾದ ತತ್ವವಾಗಿದೆ.

ಬಸವಣ್ಣ ತನ್ನ ಸ್ವಭಾವವನ್ನು ನಾಯಿಗೆ ಹೋಲಿಸಿಕೊಂಡು ತನ್ನ ಅಂತರಂಗದ ಶುದ್ಧತೆಗೆ ತೊಡಗುತ್ತಾನೆ.

ಅಂದಣವನೇರಿದ ಸೊಣಗನಂತೆ
ಕಂಡಡೆ ಬಿಡದು ತನ್ನ ಮುನ್ನಿನ ಸ್ವಭಾವವನು
ಸುಡು ಸುಡು ಮನವಿದು ವಿಷಯಕ್ಕೆ ಹರಿವುದು
ಮೃತ ನಿಮ್ಮನನುದಿನ ನೆನೆಯಲಿಯದು
ಎನ್ನೊಡೆಯ ಕೂಡಲಸಂಗಮದೇವಾ
ನಿಮ್ಮ ಚರಣದ ನೆನೆವಂತೆ ಕರುಣಿಸು
ಸೆರೆಗೊಡ್ಡಿ ಬೇಡುವೆ ನಿಮ್ಮ ಧರ್ಮ

(ಬ.ವ.ವ.ಸಂ-೩೪)

ತಾನು ಎಷ್ಟೇ ದೊಡ್ಡವನಾದರು ತನ್ನ ಸ್ವಭಾವದಲ್ಲಿ ವ್ಯತ್ಯಾಸಕಾಣದೆ ಕೊರಗುವ ಮೃದು ಹೃದಯದಂತೆ ಚಡಪಡಿಸುವ ಬಸವಣ್ಣ ತನ್ನ ಮನವನ್ನು ನಾಯಿಗೆ ಹೋಲಿಸಿಕೊಂಡು ಅದು ಯಾವುದೇ ರೀತಿಯಲ್ಲಿ ತತ್ವ ಶಾಸ್ತ್ರಗಳನ್ನು ಕಲಿಸಿದರು. ಬುದ್ಧಿಹೇಳಿದರೂ ಬದಲಾಗದೆ ತನ್ನ ಸ್ವಭಾವದಲ್ಲೇ ಇರುವಂತೆ ಬಸವಣ್ಣನ ಮನಸುಟ್ಟು ಕೆಲಕಾಲ ಯಾವುದೋ ಪರಂಪರೆಯ ಸೆಳೆತಕ್ಕೆ ತಲೆಬಾಗಿ ಅದರತ್ತಲೇ ವಾಲುವ ನಿಲ್ಲುವ, ಪ್ರಯತ್ನದಲ್ಲಿದ್ದಾಗ ಈ ತರಹದ ಆತ್ಮ ವಿಮರ್ಶೆಯನ್ನು ಮಾಡಿಕೊಂಡು ತನ್ನ ತತ್ವ ಸಿದ್ಧಾಂತಕ್ಕೆ ಶರಣರ ಆದರ್ಶ ಸಮಾಜಕ್ಕೆ ಅವಶ್ಯವಾಗಿರುವ ಆತ್ಮ ನಿವೇದನೆ ಸರ್ವ ಸಮರ್ಪಣ ಭಾವವನ್ನು ಪುನರ್ ಪ್ರತಿಷ್ಠಾಪಿಸುವ ಯತ್ನವನ್ನು ಮಾಡುತ್ತಾನೆ ಎಂದು ಹೇಳಬಹುದಾಗಿದೆ.

ತುಪ್ಪದ ಸವಿಗೆ ಅಲಗನೆಕ್ಕುವ ಸೊಣಗನಂತೆ ಎನ್ನಬಾಳುವೆ,
ಸಂಸಾರ ಸಂಗವ ಬಿಡದು ನೋಡೆನ್ನ ಮನವು,
ಈ ನಾಯಿ ತನವ ಮಾಣಿಸು
ಕೂಡಲ ಸಂಗಮದೇವ ನಿಮ್ಮ ಧರ್ಮ

(ಬ.ವ.ವ.ಸಂ-೩೫)

ಸಂಸಾರದ ಬಂಧನದಲ್ಲಿಯೇ ಜೀವನವನ್ನು ಸಂಪೂರ್ಣವಾಗಿ ಕಳೆದುಕೊಳ್ಳುವುದನ್ನು ಒಪ್ಪಲಾರದ ಬಸವಣ್ಣ ತನ್ನ ಸಂಸಾರದ ಮೋಹದಿಂದ ಹೊರಬರಲು ಸಾಧ್ಯವಾಗದೆ, ವ್ಯಥೆಪಡುವ, ನೋವನ್ನು ಅನುಭವಿಸುವ ಸಂದರ್ಭದಲ್ಲಿ ತಾನು ಈ ಪ್ರಪಂಚದ ಆಸೆ,ಆಮಿಷಗಳಲ್ಲಿ ಮುಳುಗಿ ವ್ಯರ್ಥ ಜೀವನವನ್ನು ಸಾಗಿಸಲಾರೆ ಎಂದು ಆಧ್ಯಾತ್ಮದತ್ತ ಹೊರಳಿಕೊಳ್ಳುತ್ತಾನೆ. ಇತ್ತ ಸಂಸಾರವನ್ನು ಸಂಪೂರ್ಣವಾಗಿ ತ್ಯಜಿಸಲಾಗದೆ. ಸಂಪೂರ್ಣವಾಗಿ ಆಧ್ಯಾತ್ಮದತ್ತ ಸಾಗುವುದು ಸಾಧ್ಯವಾಗದ ದ್ವಂದ್ವಸ್ಥಿತಿ ಇಕ್ಕಟ್ಟಿನ ಪರಿಸ್ಥಿತಿಗೆ ಕಾರಣನಾಗುತ್ತಾನೆ. ಇಲ್ಲಿ ಮುಖ್ಯವಾಗಿ ಸಮಾಜ ಸುಧಾರಣೆಯ ಜೊತೆಗೆ ತನ್ನ ಅಂತರಂಗದ ಶುದ್ಧತೆಗೆ ತೊಡಗಿಕೊಂಡ ಬಸವಣ್ಣನನ್ನು ಸಂಸಾರದ ಮಾಯೆ ಕಾಡಿ ಸರಳಿಸಿದುದನ್ನು ಹಾಗೂ ಈ ಎಲ್ಲಾ ಅನಿಷ್ಟಗಳನ್ನು ಗೆಲ್ಲುವ ಹಂಬಲದಿಂದ ಆತ್ಮಾನ್ವೇಷಣೆಗೆ ಆತ್ಮ ವಿಮರ್ಶೆಗೆ ತೊಡಗಿಕೊಂಡು

ಬಸವಣ್ಣ ತನ್ನಲ್ಲೇ ತಾನು ಯುದ್ಧವನ್ನು ಮಾಡುತ್ತಾನೆ.

ಬಸವಣ್ಣ ೧೨ನೇ ಶತಮಾನದಲ್ಲಿ ಬಾಳಿ ಬಂದುಕಿದ್ದನು ಆತನು ಇಂದಿನ ಆಧುನಿಕ ಜಗತ್ತಿಗೆ ಪ್ರಸ್ತುತ ಮತ್ತು ಅಶಮವಾದ ವ್ಯಕ್ತಿ ಹಾಗೂ ವ್ಯಕ್ತಿತ್ವಉಳ್ಳವನಾಗಿದ್ದಾನೆ. ಏಕೆಂದರೆ ಆತನು ಸಮಾಜವಾದ ನೆಲೆಯಿಂದ ಹೊರಟವನಾಗಿದ್ದರೂ ತನ್ನ ಸ್ವಂತ ಪ್ರತಿಭೆಯಿಂದ ಸಾಧನೆ ಮಾಡಿ ಸಮಾಜೋಧಾರ್ಮಿಕ ಕ್ರಾಂತಿಯನ್ನುಂಟು ಮಾಡಿದರೂ ತನ್ನನ್ನು ತಾನು ಕಿರಿಯ ವ್ಯಕ್ತಿ ಎಂದು ಬಿಂಬಿಸಿಕೊಂಡು ಮಹಾವ್ಯಕ್ತಿಯಾಗಿದ್ದಾನೆ. ಉದ್ದೇಶಪೂರ್ವಕವಾಗಿ ಬಸವಣ್ಣ ತನ್ನ ಆತ್ಮವಿಮರ್ಶೆಗೆ ತೊಡಗಿಕೊಂಡು ತನ್ನನ್ನು ತಾನು ಜರಿದುಕೊಂಡು ತನ್ನ ದಳಅರಿಯುದ್ದಕ್ಕೂ ಅಪ್ಪಿತಪ್ಪಿ ತಪ್ಪು ಮಾಡದಂತೆ ಎಚ್ಚರವಹಿಸಿಕೊಳ್ಳುತ್ತಾನೆ. ಅಂತರಂಗದ ಶುದ್ಧತೆಯಕಡೆಗೆ ಒಲವು ಕೊಟ್ಟ ಬಸವಣ್ಣ ತನ್ನ ಅಂತರಂಗವನ್ನು ಶುದ್ಧಗೊಳಿಸಿಕೊಳ್ಳುವ ಮೂಲಕ ಆಧ್ಯಾತ್ಮಕವಾಗಿ ಧಾರ್ಮಿಕವಾಗಿ ಸಾಮಾಜಿಕವಾಗಿ ಮಹತ್ವವಾದುದನ್ನು ಸಾಧಿಸಿದ ವ್ಯಕ್ತಿತ್ವವುಳ್ಳವನಾಗಿದ್ದಾನೆ.

**ಸಾಮಾಜಿಕವಾಗಿ**

ಬಸವಣ್ಣನವರು ಸಾಮಾಜಿಕವಾಗಿ ೧೨ನೇ ಶತಮಾನದಲ್ಲಿ ಮಾಡಿದ ಕ್ರಾಂತಿಯು ಮಹತ್ವ ಪೂರ್ಣವಾದುದಾಗಿದೆ. ಸುಮಾರು ೮೦೦ ವರ್ಷಗಳ ಹಿಂದಿನ ಕರ್ನಾಟಕದ ಪರಿಸ್ಥಿತಿಯನ್ನು ತಿಳಿಯಲು ಇತಿಹಾಸವನ್ನು ನೋಡಿದರೆ ಈ ಕ್ರಾಂತಿಯ ಅವಶ್ಯಕತೆ ಮತ್ತು ಸಂದರ್ಬೋಚಿತರತೆ ನಮಗೆ ಕಾಣುತ್ತದೆ. ಅಂದಿನನದು ವಿಷಮ ಸಮಾಜವಾಗಿದ್ದು ಅದರಲ್ಲಿ ಜಾತಿ ಪದ್ಧತಿಯು, ವರ್ಣ ವ್ಯವಸ್ಥೆಯು, ವರ್ಗ ವ್ಯವಸ್ಥೆಯು, ಪ್ರಬಲವಾದ ಪದ್ಧತಿಯಾಗಿತ್ತು. ಸ್ತ್ರೀ- ಪುರುಷರ ಗುಂಪಿನ ಲಿಂಗ ತಾರಾತಮ್ಯವು ನೆಲೆನಿಂತಿತ್ತು ಮೇಲು ಕೀಳು, ಬಡವ ಶ್ರೀಮಂತ ಹೀಗೆ ಯಾವ ರೀತಿಯಲ್ಲಿ ಸಾಮಾನ್ಯ ಜನರನ್ನು ಸಮಾಜವನ್ನು ಶೋಷಣೆ ಮಾಡಬೇಕಿತ್ತು. ಅಂತಹ ಎಲ್ಲಾ ವಿಧಧ ಶೋಷಣೆಗಳು ನಡೆಯುವಂತಹಾ ಕಾಲಘಟ್ಟವಾಗಿತ್ತು . ಸನಾತನ ಪರಂಪರೆಯು ಸಾಮಾನ್ಯ ಜನರನ್ನು ಶೋಷಿಸುತ್ತಾ ತಮ್ಮ ಹಿತ ಸಾಧನೆಯನ್ನು ಮಾಡಿಕೊಳ್ಳುತ್ತಾ ಜೀವನ ನಡೆಸುತ್ತಿದ್ದರು. ಇಂತವರ ಕೈಗೊಂಬೆಗಳಂತೆ, ಒಣ ಸಂಪ್ರದಾಯಕ್ಕೆ ಕಟ್ಟು ಬಿದ್ದು ನೇತಾಡುವ ಸ್ಥಿತಿಯಲ್ಲಿರು ಶೂದ್ರರು, ಪಂಚಮರು, ಸಮಾಜದ ಕೆಳವರ್ಗದ, ಕೆಳಜಾತಿಯ ಜನರು ಪರಹಿತಕ್ಕಾಗಿಯೇ ಸನಾತನ ವಾದಿಗಳ ಹಿತಕ್ಕಾಗಿಯೇ ದುಡಿದು ದುಸ್ತರ ಜೀವನ ಸಾಗಿಸಬೇಕಾಗಿತ್ತು. ಚಾತುರ್ವರ್ಣ ಪದ್ಧತಿಯಿಂದ ಸಮಾಜ ಅನೇಕ ಶೋಷಣೆಗಳಿಂದ ಜಾತಿಮೂಲಗಳಿಂದ ಬಡವಾಗಿತ್ತು. ವೈದಿಕ ಧರ್ಮ

ತನ್ನಲ್ಲಿ ಮತ್ತು ಸಮಾಜದ ಇನ್ನಿತರ ವರ್ಗಗಳಾದ ಶೂದ್ರ ಮತ್ತು ಪಂಚಮರನ್ನು ತನ್ನ ಆಧೀನದಲ್ಲಿಟ್ಟುಕೊಂಡು ಶೋಷಣೆ ಮಾಡುತ್ತಿತ್ತು. ಅಸ್ಪರ್ಶರು, ಕೆಳವರ್ಗದವರು ಆದ ಪಂಚಮರು ಸಮಾಜದ ಅತ್ಯಂತ ಹೇಯವಾದ ಸ್ಥಾನದಲ್ಲಿದ್ದರು. ಅವರನ್ನು ತಮ್ಮ ಸ್ವಾರ್ಥ ಸಾದನೆಗಾಗಿಯೇ ಅಂದಿನ ಮೇಲ್ವರ್ಗದ ಸಮಾಜದವರು ಬಳಸಿಕೊಳ್ಳುತ್ತಿದ್ದರು. ಪಂಚಮರಿಗೂ ಒಂದು ಮನಸ್ಸುಂಟು, ಅವರು ಅವರು ಮನುಷ್ಯರೆಂದು ಗುರುತಿಸುವ ತಿಳಿಯುವ ಮನಸ್ಸು ಸಮಾನತೆಯ ದೃಷ್ಠಿ ಅಂದಿನ ಶೋಷಕ ಸಮುದಾಯದ ಯಾರಿಗೂ ಇರಲಿಲ್ಲ. ಆದರೂ ಇವರ ದುಡಿಮೆಯಿಂದಲೇ ಮೇಲ್ವರ್ಗದವರ ಬದುಕು ಸಾಗುತ್ತಿತ್ತು. ಇಂತಿವರ ಪಾಲಿಗೆ ಧರ್ಮ ಎಂಬುದೇ ಇರಲಿಲ್ಲ. ಆದರೆ ಬಸವಣ್ಣನವರ ನೇತ್ರತ್ವದಲ್ಲಿ ನಡೆದ ವಚನ ಚಳುವಳಿ, ಶರಣರ ಚಳುವಳಯಿಂದ ಸಮಾಜದ ಸರ್ವ ಜನರು ಶ್ರೇಷ್ಠರು ಎಂಬ ಪರಿಕಲ್ಪನೆ ಮೂಡಿತು. ವೈದಿಕ ಪರಂಪರೆಯ ಕಪಿ ಮುಷ್ಠಿಯಲ್ಲಿದ್ದ, ಧರ್ಮ, ದೇವರು, ಮಡಿ, ಮೈಲಿಗೆ, ಕರ್ಮ, ಯಜ್ಞ, ಯಾಗ, ಆಚರಣೆಗಳು ಮಂತಾದ ಹೆಸರುಗಳ ಮೇಲೆ ಶೋಷಣೆಗೆ ಈ ವಚನ ಚಳುವಳಿ ತಡೆಯನ್ನುಂಟು ಮಾಡಿತು. ಇದರಿಂದ ಶೂದ್ರರು, ಪಂಚಮರು, ಸಮಾಜದ ಕೆಳಸ್ತರದ ವರ್ಗದ ಜಾತಿಯವರು ಈ ಶರಣರ ಆಂದೋಲನದಲ್ಲಿ ಭಾಗವಹಿಸಿ ತಮ್ಮ ಸ್ಥಾನ ಮಾಣಗಳನ್ನು ಎತ್ತರಿಸಿಕೊಂದು ನೆಮ್ಮದಿಯಿಂದ ಜೀವನ ನೆಡೆಸತೊಡಗಿದರು. ಇಂತಹ ಸಮಾಜೋಧಾರ್ಮಿಕ, ಹೋರಾಟದ ನೇತ್ರತ್ವವಹಿಸಿಕೊಂಡಿದ್ದ ಬಸವಣ್ಣ, ಬಿಜ್ಜಳನ ರಾಜ್ಯದಲ್ಲಿ ಉನ್ನತ ಹುದ್ದೆಯಾದ ಮಂತ್ರಿ ಪದವಿಯಲ್ಲಿದ್ದುಕೊಂಡು ಸಮಾಜ ಸುಧಾರಣೆಯಲ್ಲಿ ತೊಡಗಿ ಬ್ರಾಹ್ಮಣ ಮೊದಲು, ಅಂತ್ಯಜ ಕೀಳು ಎಂಬ ನಂಬಿಕೆಗಳನ್ನು ಹೋಗಲಾಡಿಸಿ. ಒಂದು ಹೊಸ ಕ್ರಾಂತಿಯೊಂದನ್ನು ಮಾಡುವುದರ ಮೂಲಕ ಕ್ರಾಂತಿಕಾರಿ ಎಂದೆನಿಸಿಕೊಂಡಿದ್ದಾನೆ. ಸಾಮಾಜಿಕವಾಗಿ ಸ್ತ್ರೀಯು ಕೆಳಸ್ತರದ ವರ್ಗದವರಿಗಿಂತಲೂ ಕೆಳಮಟ್ಟದಲ್ಲಿ ಇರುವ ಸ್ಥಿತಿಯು ನಿರ್ಮಾಣವಾಗಿಬಿಟ್ಟಿತ್ತು. ಅವಳಿಗೆ ಯಾವುದೇ ರೀತಿಯ ಸ್ವಾಂತ್ರ್ಯಗಳಾಗಲಿ ಇರಲಿಲ್ಲಾ . ಧಾರ್ಮಿಕವಾಗಿ ಅವಳಿಗೆ ಮೋಷವೆ ಇಲ್ಲವೆಮದು ಸನಾತನ ಪರಂಪರೆ ಅವಳನ್ನು ಕಡೆಗಣಿಸಿಬಿಟ್ಟಿತ್ತು. ಅಂತಹಾ ನಿರ್ದಯ ಸ್ಥಿಯಲ್ಲಿದ್ದ ಮಹಿಳೆಯರಿಗೆ ಮುಕ್ತ ಅವಕಾಸವನ್ನು ಸಾಮಾಜಿಕ, ಧಾರ್ಮಿಕ ಆಧ್ಯಾತ್ಮಿಕ ಸ್ವಾತಂತ್ರ್ಯವನ್ನು ನೀಡಿ ಅವಳಿಗೆ ಪುರುಷರಷ್ಟೆ ಸ್ಥಾನಮಾನವನ್ನು ಬಸವಣ್ಣನವರ ನೇತ್ರತ್ವದ ಶರಣರ ಚಳುವಳಿ ನೀಡಿತು. ಅಲ್ಲಿನ ತನಕ ಹೆಣ್ಣನ್ನು ಮಾಯೆ ಎಂದುಕರೆದು ಪುರುಷನ ಉನ್ನತಿಗೆ ಅವಳು ಮಾರಕ ಎಂದು ಬಿಂಬಿಸಲಾಗಿತ್ತು. ಇದಕ್ಕೆ ವಿರುದ್ದವಾಗಿ ಶರಣರು ಹೆಣ್ಣು ಮಾಯೆಯಲ್ಲಿ ಅವಳು ಸಾಕ್ಷಾತ್ ದೇವಿ ಎಂದು ಆಕೆಯ ಸ್ಥಾನವನ್ನು ಉನ್ನತಿಕರಿಸಿತು. ಇದಕ್ಕೆ ನಾವು ಆದ್ಯವಚರಕಾರಾದ ದೇವರ ದಾಸಿಮಯ್ಯನ ಮಾತು ಸ್ತ್ರೀಗೆ ಸರ್ವತಂತ್ರ ಸ್ವತಂತ್ರಳನ್ನಾಗಿಸಿತು.

"ಮೊಲೆ ಮುಡಿ ಬಂದರೆ ಹೆಣ್ಣೆಂಬರು
ಗಡ್ಡ ಮೀಸೆ ಬಂದೆಡೆ ಗಂಡೆಂಬರು
ನಡುವೆ ಸುಳಿವಾತ ಹೆಣ್ಣು ಅಲ್ಲ ಗಂಡು ಅಲ್ಲ
ಕಾಣಾ ರಾಮನಾಥ"

ಎಂಬ ಈ ಮಾತು ಸ್ತ್ರೀ ಸಮಾಜಕ್ಕೆ ಒಂದು ಚೈತನದಾಯಕ ವಾದುದಾಯಿತು. ಅವರಲ್ಲಿ ತಾವು ಗಂಡಿನಷ್ಟೆ ಪ್ರಾಮುಖ್ಯರು. ನಮ್ಮಲ್ಲಿ ಅಂತಹಾ ಪ್ರತಿಭೆಗಳಿವೆ ಎಂಬ ಎಚ್ಚಲಿಗೆಯ ಭಾವ ಮೂಡಿತು ಇದರಿಂದ ಶರಣರ ಸಮಾಜೋಧಾರ್ಮಿಕ ಚಳುವಳಿಯಲ್ಲಿ ಭಾಗವಹಿಸಿ ಪ್ರಮುಖವಾದ ಸ್ಥಾನಮಾನ ಪಡೆದವರಾದರು. ಇದಕ್ಕೆ ಬಸವಣ್ಣನವರ ಚಳುವಳಿಯ ಮೂಲಾಕಾರಣವಾಗಿ ಸ್ತ್ರೀಯರಿಗೆ ಸೂಕ್ತವಾದ ಸ್ಥಾನಮಾನ ನೀಡಿಸವರಲ್ಲಿ ಪ್ರಮುಖನಾಗಿದ್ದಾನೆ.

ಜಾತಿಯ ವ್ಯವಸ್ಥೆಯ ವಿರುದ್ಧ ತಿರುಗಿಬಿದ್ದ ಬಸವಣ್ಣ, ತಾನು ಮೇಲ್ಜಾತಿಯಲ್ಲಿ ಹುಟ್ಟಿದ್ದರು ಅದರ ಹಂಗನ್ನು ತೊರೆದು ಜಾತಿಯಿಂದ ಯಾವಬ್ಬ ವ್ಯಕ್ತಿಯು ಶ್ರೇಷ್ಠನಲ್ಲ . ಅವನು ತನ್ನ ವ್ಯಕ್ತಿತ್ವದಿಂದ ಅಂತರಂಗದ ಶುದ್ಧತೆಯಿಂದ ಶ್ರೇಷ್ಠನಾಗುತ್ತಾನೆ ಎಂದು ಹೇಳುವುದರ ಮೂಲಕ ತನ್ನ ಕುಲದ ಬಗ್ಗೆ ತನ್ನ ಜಾತಿಯ ಬಗ್ಗೆ ಕೀಳರಿಮೆ ತಾಳಿ ತಾನು ಸಮಾಝುದ ಕಟ್ಟಕಡೆಯನು ಎಮದು ಗುರುತಿಕೊಳ್ಳುವ ಪ್ರಯತ್ನಮಾಡಿ ತನ್ನ ಮನದಲ್ಲಿ ತನ್ನನ್ನು ಸದಾ ಕಂಡುತ್ತಿದ್ದ ಈ ಮೇಲ್ಜಾತಿಯ ಶಬ್ದವನ್ನು ಇಲ್ಲವಾಗಿಸುತ್ತಾನೆ. ಬಹುಶಃ ಜಾತಿ ಪದ್ಧತಿಯನ್ನು ನೀರಾಕರಿಸಿದ ಬಸವಣ್ಣನಿಗೆ, ಎಲ್ಲೋ ಒಂದು ಮೂಲೆಯಲ್ಲಿ ಜಾತಿಯವಾಸನೆ ಬಂದಿರಬೇಕು ಅಥವಾ, ನೀನು ಮೇಲ್ಜಾತಿಯವನು ಎಂಬ ಭಾವದಿಂದ ಶರಣ ಸಂಗಾತಿಗಳು ಆತನನ್ನು ನೋಡುವ ಪ್ರಯತ್ನ ಮಾಡಿರಬೇಕು. ಇದಕ್ಕಾಗಿ ಇಡೀ ಸಮಾಜಕ್ಕೆ ಜಾತಿಯ ಸಂಶಯವನ್ನು ದೂರ ಮಾಡಿ ತನ್ನ ಅಂತರಂಗದಲ್ಲಿ ಅಡಗಿದ್ದ ಜಾತಿಯನ್ನು ದೂರಸರಿಸುತ್ತಾನೆ.

"ಅಪ್ಪನ್ನು ನಮ್ಮ ಮಾದಾರ ಚನ್ನಯ್ಯ
ಅಪ್ಪನ್ನು ನಮ್ಮ ಡೋಹರ ಕಕ್ಕಯ್ಯ,
ಚಿಕ್ಕಯ್ಯ ನಮ್ಮಯ್ಯ ಕಾಣಯ್ಯ,
ಅಣ್ಣನು ನಮ್ಮ ಕಿನ್ನರ ಬೊಮ್ಮಣ್ಣನು.
ಎನ್ನನೇತಕ್ಕರಿಯಿರಿ ಕೂಡಲಸಂಗಮ ದೇವಾ?

(ಬ.ವ.ವ.ಸಂ–೩೪೬)

ಸಮಾಜದ ಕೆಳಸ್ತರದ ದಲಿತ ವರ್ಗದ ಶರಣರನ್ನು ತನ್ನ ಸಂಬಂದಿಗಳನ್ನು ತಂದೆ ಮಗಳೆಂದು ಕರೆದರು , ಅವರೊಡನೆ ಭಾವನಾತ್ಮಕ ಸಂಭಂದವನ್ನು ಬೆಳೆಸುವ ಪ್ರಯತ್ನ ಸಾಮಾನ್ಯವಾದುದಲ್ಲಾ, ಬಸವಣ್ಣನ ಇಂತಹಾ ನುಡಿಗಳನ್ನು ಮತ್ತು ಜಾತಿಯುತ ವಾದ ನಡೆಯನ್ನು ಕಂಡರೂ ಆತನನ್ನು ಮೇಲ್ಜಾತಿ ಎಂಬ ಭಾವನೆಯನ್ನು ಕಂಡಿರಬೇಕು? ಅದಕ್ಕಾಗಿಯು ಧೈನ್ಯತಭಾವದಿಂದ ಬಸವಣ್ಣ " ಎನ್ನನೇತಕ್ಕರಿಯಿರಿ ಎಂದು ಪ್ರಶ್ನೆ ಮಾಡುತ್ತಾನೆ ಇಲ್ಲಿ ಬಸವಣ್ಣನು ಎತ್ತುವ ಪ್ರಶ್ನೆಯ ಆತನ ಅಂತರಂಗದ ತುಮುಲ, ತಳಮಳ, ತುಡಿತಗಳನು ತೋರುವುದರ ಜೋತೆಗೆ ಆತನ ಸಮಾಜಕ್ಕೆ ಮಾರ್ಮಿಕವಾದ ಪೆಟ್ಟನ್ನು ನೀಡುತ್ತದೆ.

"ಅಪ್ಪನು ಡೋಹರ ಕಕ್ಕಯ್ಯನಾಗಿ,

ಮುತ್ತಯ್ಯ ಚೆನ್ನಯ್ಯನಾದರೇ ಅನುಬದುಕನೇ?

ಮತ್ತು ಶ್ವಪಚಯ್ಯನ ಸನ್ನಿಧಿಯಿಂದ

ಭಕ್ತಿಯ ಸದಗುಣವನಾನು ಅವಿವೆನಯಾ,

ಕಷ್ಟ ಜಾತಿ ಜನ್ಮದಲಿ ಜನಿಸಿದೆ ಎನ್ನ

ಎನಗಿದು ವಿಧಿಯ ಕೂಡಲಸಂಗಮ ದೇವಾ?

(ಬ.ವ.ವ.ಸಂ–೩೪೩)

ಜಾತಿಯನ್ನು ಸಂಪೂರ್ಣವಾಗಿ ತ್ಯಜಿಸಿದ ಬಸವಣ್ಣನಿಗೆ ತನ್ನ ಜಾತಿಯನ್ನು ಕುರಿತು ಹಲವಾರು ಸಮಸ್ಯೆಗಳು ಎದುರಾಗಿರುವ ಸಾಧ್ಯತೆಗಳು ಹೆಚ್ಚು, ಇಂತಹಾ ಸಮಸ್ಯೆಗಳಿಗೆ ಸಿಕ್ಕಿಕೊಂಡರು ಸಹ ತನ್ನಲಿರುವ ಜಾತಿಯನ್ನು ಎಂದು ಸ್ಮರಿಸುವ ಕೆಲಸ ಮಾಡುವುದಿಲ್ಲಾ, ಹಚ್ಚಿತಕ್ಕಿದೆಂತೆಲ್ಲಾ ಹೇಗೆ ಬೆನ್ನ ಹೊಳೆಯುತ್ತದೆಯೋ ಹಾಗೇಯೇ ಬಸವಣ್ಣನವರು ಕೂಡ ಇಂತಹಾ ಸಮಸ್ಯೆಗಳಿಗೆ ಹೆದರದೆ ತನ್ನ ಅಂತರಂಗದ ಆತ್ಮದಲ್ಲಿ ಸಂಪೂರ್ಣವಾಗಿ ತಾನು ಯಾವ ಜಾತಿಯವನಲ್ಲಾ ಎಂದು ತುಂಬಿಕೊಂಡಿದ್ದವನೆ ಆಗಿದ್ದಾನೆ. ಆ ಜಾತಿಯು ತನ್ನನ್ನು ಕಾಡದಿರಲು ತಾನು ಪರಿಪೂರ್ಣ ವ್ಯಕ್ತಿಯಾಗಲು. ತನ್ನ ಅಂತರಂಗದ ಶುದ್ದಿಗೆ ತೊಡಗಿದ್ದ ಬಸವಣ್ಣ . ತನ್ನ ನಿಲುವು ನಿರ್ಧಾರಗಳಿಗೆ ಕಟಿಬದ್ಧವಾಗಿಯೆ ಇದ್ದವನಾಗಿದ್ದಾನೆ. ಆತನ ಈ ನಿಲುವಿಗೆ ಆತನ ಈ ವಚನವನ್ನು ನೋಡಬಹುದಾಗಿದೆ.

ಸೂಳೆಗೆ ಹುಟ್ಟಿದ ಕೂಸಿನಂತೆ

ಆರನಾದಡೆಯ 'ಅಯ್ಯಾ ಅಯ್ಯಾ' ಎನಲಾರೆ

ಚೆನ್ನಯ್ಯ ನೆಮ್ಮಯ್ಯನು, ಚೆನ್ನಯ್ಯನ ಮಗನಾನು.

ಕೂಡಲಸಂಗನ ಮಹಾಮನೆಯರಿ

ಧರ್ಮ ಸಂತಾನಿ ಭಂಡಾರಿ ಬಸವಣ್ಣನು.

(ಬ.ವ.ವ.ಸಂ–೩೪೩)

ಚೆನ್ನಯ್ಯನ ಮನೆಯ ದಾಸನ ಮಗನು

ಕಕ್ಕಯ್ಯನ ಮನೆಯ ದಾಸಿಯಮಗಳು

ಇವರಿಬ್ಬರ ಹೊಲದಲ್ಲಿ ಬೆರಳಿಗೆ ಹೋಗಿ, ಸಂಗವ ಮಾಡಿದರು

ಇವರಿಬ್ಬರಿಗೆ ಹುಟ್ಟಿದ ಮಗನಾನು

ಕೂಡಲಸಂಗಮದೇವಾ ಸಾಕ್ಷಿಯಾಗಿ.

(ಬ.ವ.ವ.ಸಂ–೩೪೫)

ಆತ್ಮನೀರಿಕ್ಷೆಗೆ ಆತ್ಮವಿಮರ್ಶೆಗೆ ತೊಡಗಿದ . ವ್ಯಕ್ತಿಗಳು ಸಾಮಾನ್ಯವಾಗಿ ಹಲವಾರು ಗೊಂದಲಗಳಿಗೆ ಸಂಕಟಗಳಿಗೆ ಸಿಲುಕಿಕೊಂಡು ವ್ಯತೆ ಪಡುವುದು ಸಹಜ. ಅದಕ್ಕೆ ಬಸವಣ್ಣನು ಕೂಡ ಹೊರತಾಗಿಲ್ಲ. ತನ್ನ ತನದ ಅರಿವಿನ ಸ್ವರೂಪವನ್ನು ಕಂಡುಕೊಂಡು ಬಸವಣ್ಣ ಸಹಜವಾಗಿಯೇ ತನ್ನ ಮೂಲವನ್ನು ಸಂಶಯದಿಂದ ಸಂಕೋಚದಿಂದ ಬಚ್ಚಿಡುವ ಪ್ರತಯ್ನಮಾಡುತ್ತಾನೆ. ಆತನ ಅಂತರಂಗದಲ್ಲಿರುವ ನೋವು ಸಮಾಜದ ಇತರರಿಗೆ ತೋರಿಸುವ ಸಲುವಾಗಿಯಲ್ಲಿದೆ. ಅವು ಸಾಧನ ಮಾರ್ಗವಾಗಿ ಹೊರಹೊಮ್ಮ ಬೇಕಾಗುತ್ತದೆ. ಈ ಮೇಲಿನ ವಚನಗಳಲ್ಲಿ ಬಸವಣ್ಣನ ತುಮುಲು, ನೋವು, ತಳಮಳ, ವ್ಯಕ್ತಗೊಂಡಿರುವುದನ್ನು ನೋಡಿದರೆ ಸಾಮಾಜಿಕ ಹೋರಾಟಗಾರನೊಬ್ಬನು, ಅಂತರಂಗದ ಶುದ್ಧಿಗಾಗಿ ಮಾಡುವ ಹೋರಾಟದ ಸ್ವರೂಪವು ಕಾಣದೆ ಇರದು. ಬಹಿರಂಗವಾಗಿ ಆಡಂಬರದ ಜೀವನ ನಡೆಸುತ್ತಾ ಜಗತ್ತಿನಲ್ಲಿರುವ ಸಮಸ್ಯೆಗಳಿಗೆ ಪರಿಹಾರ ಹುಡುಕುವ ಯತ್ನಮಾಡುವದನ್ನು ಆತ ಲೇವಡಿಮಾಡುತ್ತಾನೆ.

ಲೋಕದ ಡೊಂಕ ನೀವೇಕೆ ತಿದ್ದುವಿರಿ?

ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ,

ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ,

ನೆರೆಮನೆಯ ದುಃಖಕ್ಕೆ ಅಳುವವರು ಮೆಚ್ಚ

ಕೂಡಲಸಂಗಮದೇವಾ

(ಬ.ವ.ವ.ಸಂ-೧೨೪)

ಮೊದಲು ವ್ಯಕ್ತಿ ಶುದ್ಧನಿರಬೇಕು ನಂತರ ಆತನಿಂದ ಸಮಾಜ ಸುಧಾರಣೆಯ ಕೆಲಸ ನಡೆಯಬೇಕು . ಆದರೆ ಸಮಾಜದ ಓರಿಕೊರೆಗಳನ್ನು ಸುಧಾರಿಸಿ ಹೊರಟು ಅಲ್ಲಿ ಸೋತು. ತನ್ನ ಅಂತರಂಗ ಸ್ವರೂಪ ತಿಳಿಯದೆ ಅಲ್ಲಿಯು ಸೋತು ನಿರಾಶರಾಗದೆ ಮೊದಲು ತನ್ನ ತಾನು ಅರಿಯಬೇಕು. ಇದರಿಂದ ಪ್ರತಿಯೊಬ್ಬರು ತಮ್ಮನ್ನು ತಾವು ಅರಿತುಕೊಂಡಾಗ ಸಮಾಜವು ತಾನೇ ತಾನಾಗಿ ಸುಧಾರಣೆಗೊಳ್ಳುತ್ತದೆ. ಎಂಬ ಉದಾರತೆಯ ತತ್ವ ಇಲ್ಲಿ ಗೋಚರಿಸುತ್ತದೆ. ಅಂದಿನ ಸಮಾಝುದಲ್ಲಿ ಇಂತಹ ಧಾರ್ಮಿಕ ತನದ ಹೋರಾಟಗಾರರೇ ಹೆಚ್ಚಿಗಿದ್ದು ಇದರಿಂದ ಎಲ್ಲರು ಶಿವಭಕ್ತರಂತೆ ವೇಷಹಾಕಿಕೊಂಡು ಆತನ ಮಹಾಮನೆಯಲ್ಲಿ ವ್ಯತ ಕಾಲಹರಣ ಮಾಡಿ. ಜೀವನ ಸಾಸಿಸುವವರನ್ನು ನೋಡಿಯೇ? ಅಥವಾ ತನ್ ಅರಿವಿನ ಸ್ವರೂಪವನ್ನು ತಿಳಿಯದೆ, ತನ್ನ ಮುನ್ನಿಸ ಸ್ವಭಾವವನ್ನು ಬಿಡದೆ, ಯಥಾಸ್ಥಿತಿಯಲ್ಲಿ ಮುಂದುವರೆವ ಜನರನ್ನು ಕುರಿತಾಗಿಯೋ? ಈ ಮಾತನ್ನು ಬಸವಣ್ಣ ಹೇಳಿರಬಹುದಾಗಿದೆ. ಇಂತಹ ಮಾತುಗಳು ಕೇವಲ ಅಂದಿನ ಸಂಧರ್ಭಕಷ್ಟೇ ಸೀಮಿತವಾಗಿದೆ. ಇಂದಿನ ಆಧಿನಿಕ ಯುಗಕ್ಕೂ ಅನ್ವಯವಾಗಿರುಂತಹುದಾಗಿದೆ. ಒಟ್ಟಿನಲ್ಲಿ ಬಸವಣ್ಣ ಸಾಮಾಜಿಕವಾಗಿ ತನ್ನನ್ನು ತೊಡಗಿಸಿಕೊಂಡರು ತನ್ನ ಆತ್ಮ ಪ್ರಯತ್ನವನ್ನು ಆತ್ಮ ವಿರ್ಮಶೆಯ ಬಿಡದೆ ಮಾನವೀಯ ನೆಲೆಯಲಲಿ ಒಂದು ಹೊಸ ಸಮಾಜವನ್ನೆ ನಿರ್ಮಾಣ ಮಾಡುತ್ತಾನೆ.

**ಧಾರ್ಮಿಕವಾಗಿ**

ಬಸವಣ್ಣನವರು ದೈವವನ್ನು ನಿರಾಕರಿಸಿದವರಲ್ಲಿ ಆದರೆ ಬಹುದೇವತಾರಾಧನೆಯನ್ನು ದೈವದ ಹೆಸರಿನಲ್ಲಿ ನಡೆದ ದಬ್ಬಾಳಿಕೆ ಶೋಷಣೆಯುನ್ನು ನಿರಾಕರಿಸಿದವರು. ಏಕದೇವೋಪರಿಸನೆಯನ್ನು ಮಾಡುವುದರ ಮೂಲಕ ತನ್ನ ಅಂತರಂಗ ಶುದ್ಧಿಕರಿಸಿಕೊಂಡು ಸಾಮಾಜಿಕವಾಗಿ ಯಾರ ದಬ್ಬಾಳಿಕೆಗೂ ಬಗ್ಗದ ವ್ಯಕ್ತಿತ್ವವನ್ನು, ಸಮಾಜವನ್ನು ನಿರ್ಮಿಸ ಬಯಸಿದರು. ಇದಕ್ಕಾಗಿಯೇ ಸಮಾಜದಲ್ಲಿ ನಡೆಯುತ್ತಿದ್ದ ಅಂದ ಆಚರಣೆಗಳ ವಿರುದ್ಧ ಸನಿಮಾಡಿ ಹಲವು ದೈವದ ಎಂಜಲ ತಿಂಬುವರನೆಂಬೆ ಎಂದು ಖಾರವಾಗಿಯೇ

ಬಹುದೇವತಾರಾಧನೆಯನ್ನು ಖಂಡಿಸುತ್ತಾನೆ. ಬಸವಣ್ಣ ತನ್ನ ಇಷ್ಟ ಲಿಂಗಕ್ಕೆ ತನ್ನನ್ನು ಸಂಪೂರ್ಣವಾಗಿ ನಿವೇದಿಸಿಕೊಂಡವನಾಗಿದ್ದಾನೆ. ಲಿಂಗಕ್ಕೆ ಮನವನ್ನು ಸಮಾಜಕ್ಕೆ ತನುವನ್ನು ಮೀಸಲಿರಿಸಿದವನ್ನಾಗಿದ್ದಾನೆ. ಅಲ್ಲದೆ ಮೂರ್ತಿಪೂಜೆಯನ್ನು ಒಪ್ಪಿ ಅಪ್ಪಿಕೊಂಡಿದ್ದ ಸನಾತನವಾದಿಗಳಿಗೆ ವಿರುದ್ಧವೆಂಬಂತೆ ಮೂರ್ತಿ ಪೂಜೆಯನ್ನು ನಿರಾಕರಿಸಿ, ವ್ಯಕ್ತಿಯ ಆಧ್ಯಾತ್ಮಿಕ ಸಾಧನೆಗೆ, ಆತ್ಮದ ಶುದ್ಧತೆಗೆ, ನಿರ್ಮಲ ಹಸ್ತ ಶುದ್ಧ ಜೀವನ, ನಿಷ್ಠೆ, ನಿಯತ್ತು, ಕಾಯಕ ಮುಂತಾದ ತತ್ವಗಳಿಂದ ಸಾಧ್ಯವೆಂದು ಹೇಳಿ ಸಮಾಜದಲ್ಲಿ ತುಂಬಿದ್ದ ಹಲವು ಪ್ರಬಲ ದೇವತೆಗಳ ಆರಾಧನೆಯನ್ನು ಕಂಡಿಸಿ, ಸಾತ್ವೀಕ ಸ್ವರೂಪದ ಲಿಂಗವನ್ನು ನೀಡಿ ಸಮಾಜದ ಸುಧಾರಣೆಯನ್ನು ಮಾಡುತ್ತಾನೆ.

ಕಲ್ಲು ನಾಗರ ಕಂಡೆಡೆ ಹಾಲನೆರೆಯೆಂಬರು
ದಿಟದ ನಾಗರ ಕಂಡೆಡೆ ಕೊಲ್ಲೆಂಬರಯ್ಯಾ
ಎಂಬ ಜಂಗಮ ಬಂದಡೆ ನಡೆಯಂಬರು
ಉಣ್ಣದ ಲಿಂಗಕ್ಕೆ ಬೋನವ ಹಿಡಿಯಂಬರಯ್ಯಾ
ನಮ್ಮ ಕೂಡಲ ಸಂಗನ ಶರಣರ ಕಂಡು ಉದಾನೀನವ
ಮಾಡಿದಡೆಕಲ್ಲುತಾಗಿದ ಮಿಟ್ಟೆಯಂತಪ್ಪರಯ್ಯಾ.

(ಬ.ವ.ವ.ಸಂ–೧೯೪)

ಅಂದಿನ ಸಮಾಜದ ಸ್ಥಿತಿಯನ್ನು ಈ ವಷನದ ಮೂಲಕ ವಿವರಿಸುತ್ತಾನೆ. ಸನಾತನವಾದಿಗಳ ಆಚರಣೆಗಳಿಗೆ ಬಲಿಯಾಗುತ್ತಿದ್ದ ಸಾಮಾಣ್ಯ ವರ್ಗದ ಜನರನ್ನು ಒಂದೆಡೆ ಸೇರಿಸಿ ಅವರಲ್ಲಿ ಜ್ಞಾನದ ಬೀಜವನ್ನು ಬಿತ್ತಿ ಭಕ್ತಿಯ ಫಲವನ್ನು ಬಯಸಿದ ಬಸವಣ್ಣ, ಮೂರ್ತಿ ಪೂಜೆಯನ್ನು ನಿರಾಕರಿಸುವ ಮೂಲಕ ವೈದಿಕ ಪರಂಪರೆಯ ಬೆನ್ನಲು ಬನ್ನೆ ಮುರಿಯುತ್ತಾನೆ. ಅಂದ ಅಚರಣೆಗೆ ಮಾರುಹೋಗಿದ್ದ ಅಂದಿನ ಸಮಾಜದ ಸಾಮಾನ್ಯ ಜನತೆಯಲ್ಲಿ, ಹೊಸ ಸಮಾಜದ, ಹೊಸ ಸಂಸಕೃತಿಯ ತಿಳುವನ್ನು ತಿಳಿಸುತ್ತಾನೆ. ಇದರಿಂದ ಸನಾತನಿಗಳ ಶೋಷಣೆ ದಬ್ಬಾಳಿಕೆಗೆ ರೋಷಿ ಹೊಗಿದ್ದ ಸಾಮಾನ್ಯ ಜನತೆಯ ಸಮಾನತೆಯ, ಸ್ವಾತಂತ್ರ್ಯತೆಯ ಕಲ್ಪನೆಯ ಮಿಳಿತದಿಂದ ನಿರ್ಮಾಣವಾದ ಹೊಸ ಸಮಾಜಕ್ಕೆ ಸೇರ್ಪಡೆಗೊಂಡರು. ಇದರಿಂದ ಸಮಾಜಿಕವಾಗಿ ಯಷ್ಟೆಯಲ್ಲಿದೆ ಧಾರ್ಮಿಕವಾಗಿ ಸ್ವಾತಂತ್ರ್ಯವನ್ನು

ಪಡೆದು ತಮ್ಮ ಅತ್ಮೋನ್ನತಿಗಾಗಿ ಅಂತರಂಗದ ಶುದ್ಧತೆಗಾಗಿ  ಆತ್ಮ ವಿಮರ್ಶೆಮಾಡಿಕೊಂಡು. ಆದರ್ಶಯುತವಾದ  ಜೀವನ ಮಾಡುವುದಕ್ಕೆ ಪ್ರಾರಂಭಿಸಿದರು ಎಂಬ ಜಂಗಮ ಬಂದಡೆ ನಡೆಯಂಬರು ಎಂದು ಬಸವಣ್ಣನವರು ಅಂದಿನ ಸಮಾಜದ ಸ್ಥಿಯನ್ನು ತೋರಿಸಿಕೊಡುತ್ತಾರೆ. ಬರಿ ಸ್ವಾರ್ಥದ ಜೀವನವನ್ನೆ  ನಡೆಸುವಂತಕಾಲ ವಾಗಿದ್ದು ಇಲ್ಲಿ ಮಾನವೀಯ ಗುಣಗಳ ದಾಸೋಹ ಮಾಡುವಂತಹಾ ನಿಸ್ವಾರ್ಥ ಜೀವಿಗಳನ್ನಾಗಿ ನಿರ್ಮಿಸುವಲ್ಲಿ ಬಸವಣ್ಣನ ಹೋರಾಟ ನಡೆಯುತ್ತದೆ.

ಬಸವಣ್ಣನವರ ಮುಖ್ಯವಾಗಿ ಧಾರ್ಮಿಕ ಹೋರಾಟವೇ ಆಗಿದೆ, ವೈದಿಕ ಪರಂಪರೆಯ ವಿರುದ್ಧ ಸ್ಥಾಪಿತವಾದ ವೀರಶೈವ ಧರ್ಮದ ಸ್ಥಾಪನೆಯ ಮೂಲ ಉದ್ದೇಶವಾಗಿದೆ. ಈ ಧರ್ಮದ ಮೂಲಕ ಸಾಮಾಜಿಕ, ಆರ್ಥಿಕ, ರಾಜಕೀಯವಾಗಿ, ಕ್ರಾಂತಿಯನ್ನು ೧೨ನೇ ಶತಮಾಣದಲ್ಲಿ ಮಾಡಲು ಮತ್ತು ಒಂದು ಪೂರ್ವದ ಪುರಾತನ ಸಂಸ್ಕ್ರತಿಯ ವಿರುದ್ಧ ಸೆಟೆದು ನಿಂತು ಮಾನವೀಯ ಮೌಲ್ಯಗಳನ್ನು ಒಳಗೊಂಡಿರುವ ಒಂದು ಆದರ್ಶ ಸಮಾಜ ಹುಟ್ಟು ಹಾಕುವುದೇ ಮೂಲ ಕಾರಣವಾಗಿದೆ. ಅನೇಕ ದೇವತೆಗಳನ್ನು ಪೂಜಿಸುತ್ತಿದ್ದ ಸನಾತನದಾದಿಗಳು ಸಾಮಾನ್ಯ ಜನರಿಗೆ ನೀಡುತ್ತಿದ್ದ ಕಿರುಕುಳವನ್ನು ಕಣ್ಣಾರೆ ಕಂಡ ಬಸವಣ್ಣನು ಈ  ಸಂಸ್ಕ್ರತಿಯ ವಿರುದ್ಧ ಸಂಪ್ರದಾಯದ ವಿರುದ್ಧ ಹೋರಾಟಕ್ಕಿಳುತ್ತಾನೆ. ಅಂದಿನ ಕೆಳ ವರ್ಗದವರ ಸ್ಥಿತಿಯು ಹೀನಾಯವಾದುದ್ದಗಿದ್ದರಿಂದ ಅವರು ಅನೇಕ ಸೂದ್ರ ದೇವತೆಗಳನ್ನು ಮಾರಯ್ಯ, ಬೀರಯ್ಯ, ಕೇತಯ್ಯ, ದೂಳಯ್ಯ, ಮುಂತಾದ ತಮ್ಮ ಕಲ್ಪನೆಯ ದೈವಗಳನ್ನು ನಂಬಿ ಪೂಜಿಸುತ್ತಿದ್ದರು, ಅಲ್ಲದೇ ಮಡಿಕೆ, ವೀರಕಲ್ಲು, ಮಾತೆ, ಮುಂತಾದವು ದೈವಗಳೆಂದು ಹಲವಾರು ಮೂಢ ಆಚರಣೆಗಳು ರೂಢಿ ಆಗಿದ್ದವು. ಇದರ ಲಾಭ ಪಡೆದುಕೊಂಡು ವೈದಿಕ ಪರಂಪರೆ ಸಮಾಜದ ಕೆಳ ವರ್ಗದವರನ್ನು ತಮ್ಮ ಹಿತಕ್ಕಾಗಿಯೇ ಬಳಸುತ್ತಿತ್ತು, ಇದನ್ನು ಸೂಕ್ಷ್ಮವಾಗಿ ಗಮನಿಸಿರುವ ಬಸವಣ್ಣ ಇದಕ್ಕೆ ಜಾಗೃತೆ ಪರಿಹಾರ ಕಂಡುಕೊಳ್ಳುವ ನಿಟ್ಟಿನಲ್ಲಿ ಸಾಮಾಜಿಕ, ಆರ್ಥಿಕ, ಧಾರ್ಮಿಕ ಹೋರಾಟಕ್ಕಿಳಿದನು ಇದರ ಫಲವಾಗಿ ಸಾತ್ವಿಕವಾದ ದೈವ ಶಿವನನ್ನು ಪರಮೋಚ್ಚ ದೈವವೆಂದು ಧ್ಯಾನ ಮಾರ್ಗಕ್ಕಿಂತ ಭಕ್ತಿ ಮಾರ್ಗ ಶ್ರೇಷ್ಟವೆಂದು ಸಾಮಾನ್ಯರಿಗೂ ಸರಳವಾಗಿ ಅರ್ಥವಾಗುವ ರೀತಿಯಲ್ಲಿ ವಚನಗಳನ್ನು ರಚಿಸಿ ಸಾಮಾಜಿಕವಾಗಿ ಕ್ರಾಂತಿಮಾಡಿದನು. ಸಮಾಜದ ಎಲ್ಲಾ ವರ್ಗದ ಜನರಿಗೆ ಲಿಂಗ ದೀಕ್ಷೇಯನ್ನು ನೀಡಿ ಶಿವಶರಣರನ್ನಾಗಿಸಿ ಎಲ್ಲರು ಸಮಾನರೆಂದು ಭಾವಿಸಿ ಸಮಾನತೆಯನ್ನು ತರಲಾಯಿತು. ಈ ಹಿಂದೆ ಇದ್ದ ಆಚರಣೆಗಳನ್ನು ದೈವವನ್ನು ಖಂಡಿಸಲಾಯಿತು ಇದಕ್ಕೆ ಬಸವಣ್ಣನ ಈ ವಚನಗಳನ್ನು ನೋಡಬಹುದಾಗಿದೆ.

ಅರಗು ತಿಂದು ಕರಗುವ ದೈವವನೆಂತು ಸರಿಯೆಂಬೆನಯ್ಯ?
ಉರಿಯ ಕಂಡರೆ ಮುರುಡುವ ದೈವನೆಂತು ಸರಿಯೆಂಬೆನಯ್ಯ?
ಅವಸರ ಒಂದೆಡೆ ಮಾರುವ ದೈವನೆಂತು ಸರಿಯೆಂಬೆನಯ್ಯ?
ಅಂಜಿಕೆಯಾದೆಡೆ ಹೊಳುವ ದೈವನೆಂತು ಸರಿಯೆಂಬೆನಯ್ಯ?
ಸಹಜಬಾವ ನಿಜೈಕ್ಯ ಕೂಡಲಸಂಗಮದೇವನೊಬ್ಬನೇ ದೇವ?

(ಬಸವಣ್ಣನವರ ವಚನ ಸಂಪುಟ ವಚನ ಸಂಖ್ಯೆ –೫೫೭)

ಹೀಗೆ ಕಂಡ ಕಂಡದೆಲ್ಲವನ್ನು ದೈವವೆಂದು ಪೂಜಿಸುವುದನ್ನು ನಿರಾಕರಿಸಿ ಇಷ್ಟಲಿಂಗದ ಪರಿಕಲ್ಪನೆಯನ್ನು ತಂದು ಸಮಾಜದ ಸಾಮಾನ್ಯ ಜನರಿಗೆ ಧರ್ಮದ ನೀತಿಯನ್ನು ಹೇಳಿ ಭಕ್ತಿಯ ಮಾರ್ಗವನ್ನು ತೋರಿಸಿ ಧಾರ್ಮಿಕವಾಗಿ ನೆಲೆಸಿದ್ದ ಮೂಢ ಆಚರಣೆಗಳನ್ನು ಸಂಪ್ರದಾಯಶೀಲತ್ವವನ್ನು ಖಂಡಿಸಿ ಲಿಂಗ ಪೂಜೆಯ ಶ್ರೇಷ್ಟಯೆಂದು ಸಾರಿ ಇದರ ಮೂಲಕ ಆತ್ಮೋನ್ನತಿ ಸಾಧ್ಯಯೆಂದು ತಿಳಿಸಿದರು. ಸಂಪ್ರದಾಯವಾದಿಗಳಿಂದ ಸಮಾಜದಲ್ಲಿ ಅಸಮತೋಲನದ ಸ್ಥಿತಿ ನಿರ್ಮಾಣಗೊಂಡಿದ್ದು, ಜ್ಞಾನ ಮಾರ್ಗ ಶ್ರೇಷ್ಠವಾದ ಸಾಧನ ಮಾರ್ಗ ಎಂದು ಹೇಳುತ್ತ ಸಾಮಾನ್ಯ ಜನರನ್ನು ದೇವರಿಂದ, ಧರ್ಮದಿಂದ ದೂರವಿರಿಸಿ ಭಕ್ತಿಯ ಹೆಸರಿನಲ್ಲಿ , ದೇವರ ಹೆಸರಿನಲ್ಲಿ ಪೂಜೆ ಪುನಸ್ಕಾರಗಳ ನೆಪದಲ್ಲಿ ಸಾಮಾಜ್ಯ ಜನರನ್ನು ವೈದಿಕ ಶಾಹಿ ಪರಂಪರೆಯು ಲೂಟಿಮಾಡುತ್ತಿದ್ದು ಇದನ್ನು ಕಂಡು ಬಸವಣ್ಣನವರು ಮರುಗಿ ಭಕ್ತಿಯ ಮಾರ್ಗವು ಶ್ರೇಷ್ಠ ಸಾಧನ ಮಾರ್ಗವಾಗಿದ್ದು ಇದರಿಂದ ಸಾಮಾಜಿಕವಾಗಿ ಕೆಳಸ್ತರದಲ್ಲಿರುವ ಜನತೆಗೆ ತಿಳಿಸಿ ಹೇಳಿ ಭಕ್ತಿಯಿಂದಲೆ ಶಿವನ ಸಾಮಿಪ್ಯ ಸಾಧ್ಯ ಎಂದು ತಿಳಿದುಕೊಂಡಿದ್ದು ಅದನ್ನೆ ಉಪದೇಶಮಾಡಿ ಸಾಮಾನ್ಯರಿಗೂ, ಅನಕ್ಷರಸ್ಥರಿಗೂ ಬಹುಸಂಖ್ಯಾತರಾಗಿದ್ದ ಕೆಳವರ್ಗದ ಜನರಿಗೂ ಇದರ ಮಹತ್ವವನ್ನು ತಿಳಿಸಿ ಹೇಳಿ ಸಮಾಜದ ಎಲ್ಲರಿಗೂ ಧರ್ಮದಲ್ಲಿ, ದೇವರಲ್ಲಿ ಭಕ್ತಿಯಲ್ಲಿ ಸಾಧನೆ ಮಾಡಲು ಆಧ್ಯಾತ್ಮಿಕವಾಗಿ ಚಿಂತನೆಮಾಡಿ ಸಮಾಜೋಧಾರ್ಮಿಕ, ಆರ್ಥಿಕವಾಗಿ ಮುಕ್ತವಾದ ಪ್ರವೇಶವನ್ನು ಕಲ್ಪಿಸಿದನು. ಇದರಿಂದ ಸಮಾಜದ ಎಲ್ಲಾ ವರ್ಗದ ಜನರ ಬೆಂಬಲ ದೊರಕಿತು. ಇದರಿಂದ ಭಕ್ತಿಗೆ ಮಹತ್ವ ದೊರಕಿತು. ಭಕ್ತಿಯ ಮಹತ್ವವನ್ನು ಹೇಳುವ ಒಂದು ವಚನ ಹೀಗಿದೆ.

ನಾದಪ್ರಿಯ ಶಿವನೆಂಬರು, ನಾದಪ್ರಿಯ ಶಿವನಲ್ಲಯ್ಯಾ.

ವೇದಪ್ರಿಯ ಶಿವನೆಂಬರು, ವೇದಪ್ರಿಯ ಶಿವನಲ್ಲಯ್ಯಾ.

ನಾದವ ನುಡಿಸಿದ ರಾವಳಂಗೆ ಅರೆ ಆಯುಷ್ಯವಾಯಿತು.

ವೇದವನೋದಿದ ಬ್ರಹ್ಮನ ಶಿರ ಹೋಯಿತ್ತು.

ನಾದಪ್ರಿಯನು ಅಲ್ಲ, ವೇದಪ್ರಿಯನು ಅಲ್ಲ,

ಭಕ್ತಿ ಪ್ರಿಯ ನಮ್ಮ ಕೂಡಲಸಂಗಮ ದೇವ.

(ಬಸವಣ್ಣನವರ ವಚನ ಸಂಪುಟ ವಚನ ಸಂಖ್ಯೆ –೧೮೧)

ವೇದ ಶಾಸ್ತ್ರಗಳನ್ನು ತಮ್ಮ ಬಂಡವಾಳವನ್ನಾಗಿಸಿಕೊಂಡು ಮೇಲ್ವರ್ಗದ ಜನರು ಬದುಕು ಸಾಗಿಸುತ್ತಿದ್ದರು. ಇಂತಹ ವೇದ ಶಾಸ್ತ್ರಗಳು ಸಾಮಾನ್ಯರ ಕೈಗೆ ಸಿಗದೆ ಅವು ಕೇವಲ ಪಂಡಿತ ಮಂಡಳಿಗೆ, ವೈದಿಕರಿಗೆ ಮಾತ್ರ ಸೀಮಿತವಾಗಿದ್ದವು. ಇದರಿಂದ ಬೇಸತ್ತ ಜನಕ್ಕೆ ಭಕ್ತಿಯ ಪರಿಕಲ್ಪನೆಯನ್ನು ಬಸವಣ್ಣನವರು ನೀಡಿ ಹೊಸದಾದ ಧಾರ್ಮಿಕ ಸಮಾಜದ ನಿರ್ಮಾಣವನ್ನು ಮಾಡಲು ಶ್ರಮಿಸಿದರು. ಮೂಲತಃ ಶರಣಧರ್ಮವು ಧಾರ್ಮಿಕವಾದ ಹೋರಾಟದ ಫಲವಾಗಿಯೇ ಹುಟ್ಟಿಕೊಂಡಿದ್ದಾಗಿದೆ. ಬಸವಣ್ಣನ ನೇತೃತ್ವದ ಆಂದೋಲನವು ಭಕ್ತಿ ಚಳುವಳಿಯಾಗಿದ್ದು ಏಕದೇವೋಪಾಸನೆಯ ತತ್ವದೊಂದಿಗೆ, ಇಷ್ಟಲಿಂಗವೆಂಬ ವಿಶಿಷ್ಠ ಪರಿಕಲ್ಪನೆಯ ರೂಪವಾಗಿ ತಲೆಯೆತ್ತಿದಂತಹದಾಗಿದೆ. ಇಂತಹ ಧಾರ್ಮಿಕ ಭಾವನೆಯಿಂದ ವ್ಯಕ್ತಿ ತನ್ನ ಅಂತರಂಗವನ್ನು ಮತ್ತು ಬಹಿರಂಗವನ್ನು ನಿಷ್ಠೆ, ಪ್ರಾಮಾಣಿಕತೆಯಿಂದ ಶುದ್ಧಗೊಳಿಸಿಕೊಳ್ಳುವುದಾಗಿದೆ. ಇದರ ನೇತೃತ್ವವಹಿಸಿದ ಬಸವಣ್ಣನವರ ವ್ಯಕ್ತಿತ್ವ ಇದಕ್ಕೆ ಹೊರತಾಗಿಲ್ಲ. ಅಧ್ಯಾತ್ಮ ವಿಚಾರಗಳಮೂಲಕ ವೈಚಾರಿಕವಿಚಾರಗಳ ಮೂಲಕತನ್ನ ನಿಲುವುಗಳನ್ನು ವಿಮರ್ಶಿಸಿಕೊಂಡು ತನ್ನ ಅಂತರಂಗದ ಪರಾಮರ್ಶೆಯನ್ನು ಮಾಡಿಕೊಂಡು ತನ್ನ ತಪ್ಪುಗಳನ್ನು ಸರಿಪಡಿಸಿಕೊಂಡು ಬೆಳೆದು ಬಂದ ಮಾನವೀಯ ಗುಣಗಳ ಕಣಜವಾಗಿ ಬಸವಣ್ಣ ನಿರ್ಮಾಣಗೊಂಡಿದ್ದಾನೆ.

**ರಾಜಕೀಯವಾಗಿ**

ಹನ್ನೆರಡನೆಯ ಶತಮಾನದ ಶರಣರ ಚಳುವಳಿ ಪ್ರಭುತ್ವದ ವಿರುದ್ಧವಾಗಿಯೇ ನಡೆದಂತಹದಾಗಿದೆ. ಸಮಾಜದ ಮೇಲೆ ಅಂದಿನ ಸಾಮಾಜಿಕ ವ್ಯವಸ್ಥೆಯಮೇಲೆ ತನ್ನ ಹಿಡಿತವನ್ನು ಹೊಂದಿದ್ದ ಪ್ರಭುತ್ವವು ಸಮಾಜವನ್ನು ಶೋಷಿಸಲು ಯಾವುದೇ ರೀತಿಯಲ್ಲಿ ಹಿಂಜರಿಯುತ್ತಿರಲ್ಲಿಲ್ಲ. ಇದಕ್ಕೆ ಬೆನ್ನೆಲುಬಂತೆ ಅಂದಿನ ಸಮಾಜದ ಮೇಲ್ವರ್ಗದ ಪುರೋಹಿತ

ಶಾಹಿಯು ಇತ್ತು. ಇವು ಒಂದು ಮಾರ್ಗದರ್ಶನ ಮಾಡಲು ಒಂದು ಅಧಿಕಾರಚಲಾಯಿಸಲು ಹೀಗೆ ಈ ಎರಡು ಶಾಖೆಗಳು ಸಮಾಜವನ್ನು ಹರಿದು ಹಂಚಿಕೊಂಡು ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಆಳ್ವಿಕೆ ನಡೆರಸುತ್ತಿದ್ದವು. ಇಂತಹ ಸಂದರ್ಭದಲ್ಲಿ ಬಸವಣ್ಣ ನವರ ನೇತೃತ್ವದಲ್ಲಿ ನಡೆದ ಸಮಾಜೋಧಾರ್ಮಿಕ ಕ್ರಾಂತಿಗೆ ವಿರೋದಗಳೆಂಬಂತೆ ಪ್ರಭುತ್ವ ಮತ್ತು ಪುರೋಹಿತ ಶಾಹಿ ವರ್ಗವು ನಿಂತಿತ್ತು. ಬಸವಣ್ಣ ಹಾಗೂ ಶರಣರು ನೇರವಾಗಿ ಪ್ರಭುತ್ವವನ್ನು ಎದುರುಹಾಕಿಕೊಂಡು ಹೋರಾಟಕ್ಕೆ ತೊಡಗಿದವರಲ್ಲ ಅವರ ಮುಖ್ಯ ಉದ್ದೇಶ ಸಮಾಜದ ಸುಧಾರಣೆ, ಧಾರ್ಮಿಕ ಸುಧಾರಣೆ, ಭಕ್ತಿಯ ಪ್ರಚಾರ ಸಮಾನತೆಯನ್ನು ನೆಲೆಗೊಳಿಸುವ ಉದ್ದೇಶ, ಜಾತೀಯತೆಯನ್ನು ಇಲ್ಲವಾಗಿಸುವ, ಜಾತ್ಯಾತೀತ ಸಮಾಜದ ನಿರ್ಮಾಣ ಕಾರ್ಯ. ಆದರೂ ಸಹ ಬಸವಣ್ಣ ರಾಜ ಪ್ರಭುತ್ವದ ಅಡಿಯನ್ನು ಬಿಜ್ಜಳನ ಕೋಶದ ಉನ್ನತ ಹುದ್ದೆಯಾದ ಮಂತ್ರಿ ಪದವಿಯಲ್ಲಿದ್ದರೂ ನಿಷ್ಠೆಯಿಂದ ಕಾಯಕವನ್ನು ಮಾಡುತ್ತಿದ್ದು ತನ್ನ ಕರ್ತವ್ಯವನ್ನು ಮರೆಯುತ್ತಿದ್ದಿಲ್ಲ. ಇದಕ್ಕೆ ಬಸವಣ್ಣನ ಈ ಮಾತೇ ಸಾಕ್ಷೀಯಾಗಿ ನಿಲ್ಲುತ್ತದೆ.

ಜೋಳವಾಳಿಯಾನಲ್ಲ,

ವೇಳೆವಾಳಿಯವ ನಾನಯ್ಯಾ

ಹಾಳುಗೆಟ್ಟೋಡುವ ಆಳು ನಾನಲ್ಲವಯ್ಯಾ,

ಕೇಳುಕೂಡಲಸಂಗಮದೇವಾ

ಮರಣವೇ ಮಹಾನವಮಿ

(ಬಸವಣ್ಣನವರ ವಚನ ಸಂಪುಟ ವಚನ ಸಂಖ್ಯೆ –೬೯)

ಪ್ರಭುತ್ವಕ್ಕೆ ಬಸವಣ್ಣ ಜೋಳವಾಳಿತನವನ್ನು, ತನ್ನ ದೈವಕ್ಕೆ ವೇಳೆವಾಳಿತನವನ್ನು ತನ್ನನ್ನು ಅರ್ಪಿಸಿಕೊಂಡವನಾಗಿದ್ದಾನೆ. ಪ್ರಭುತ್ವದ ಅಡಿಯಲ್ಲಿ ತನ್ನ ಕಾಯಕವನ್ನು ಮಾಡಿದರು ತನ್ನ ನಿಷ್ಠೆಯನ್ನು ಶಿವನಿಗೆ ಅರ್ಪಿಸಿಕೊಂಡವನಾಗಿದ್ದಾನೆ. ಮೇಲುನೋಟಕ್ಕೆ ಪ್ರಭುತ್ವದ ವಿರೋದಿಯಂತೆ ಬಸವಣ್ಣ ಕಂಡರು ಆತ ತಾನು ಯಾವುದೊ ಕಾರಣಕ್ಕೆ ಅಂಜಿಕೊಂಡು ಪ್ರಭುತ್ವಕ್ಕೆ ತೆಲೆಬಾಗುತ್ತಾನೆನೋ? ಎನ್ನುವ ಪ್ರಶ್ನೆ ಮೂಡದೇ ಇರದು ಆದರೂ ಸಹಾ ಬಸವಣ್ಣ ನೇರವಾಗಿ ಪ್ರಭುತ್ವವನ್ನು ವಿರೋದಿಸದ್ದಿದ್ದರು ಒಳಗೊಳಗೆ ಪ್ರಭುತ್ವದ ವಿರೋದಿಯಾಗಿದ್ದಾನೆ. ಇದಕ್ಕಾಗಿಯೇ ಪ್ರಭುತ್ವದಿಂದ ಶರಣರಿಗೆ ಅನೇಕ ಬಗೆಯ ಕಿರುಕುಳ ಉಂಟಾಗಿದ್ದು ಕಾರಣವಾಗಿದೆ. ಬಹುಶಃ ಬಿಜ್ಜಳನಿಗೆ ಬಸವಣ್ಣನ ಜನಪ್ರಿಯತೆಯು ತನ್ನ

ಅಧಿಕಾರಕ್ಕೆಲ್ಲಿ ಕುತ್ತು ತರುತ್ತದೋ ಎಂದು ಬಸವಣ್ಣ ತನ್ನ ಪ್ರಭುತ್ವವನ್ನು ಕಿತ್ತುಕೊಂಡು ತಾನೇ ರಾಜನಾಗಿಬಿಡುವನೇನೋ? ಎಂಬ ಭಯ ಕಾಡಿರಬೇಕು ಆಕಾರಣಕ್ಕಾಗಿಯೇ ಅನೇಕ ಪಿತೂರಿಗಳನ್ನು ಕುತಂತ್ರಗಳನ್ನು ಮಾಡುತ್ತಾ ಶರಣರಿಗೆ ಹಾಗೂ ಬಸವಣ್ಣನವರಿಗೆ ಕಿರುಕುಳ ನೀಡುತ್ತಾ, ತೊಂದರೆಯನ್ನು ತಂದೊಡ್ಡುತ್ತಾನೆ. ಇದಕ್ಕೆ ನಿದರ್ಶನ ಎಂದರೆ ಕೆಲವು ಮತ್ಸರಿಗಳು ಬಸವಣ್ಣನವರ ಏಳಿಗೆಯನ್ನು ಸಹಿಸದೆ ರಾಜನಲ್ಲಿ ಇಲ್ಲಸಲ್ಲದ ದೂರನ್ನು ನೀಡುತ್ತಾರೆ. ರಾಜ್ಯದ ಭಂಡಾರದ ಹಣವನ್ನು ಜಂಗಮರ ದಾಸೋಹಕ್ಕಾಗಿ ಬಳಸುತ್ತಾನೆ, ಇದರಿಂದ ರಾಜ್ಯದ ಬೊಕ್ಕಸವೆಲ್ಲಾ ಬರಿದಾಗುತ್ತದೆಂದು ಇಂತಹ ಚಾಡಿಕೋರರ ಮಾತಿಗೆ ಮನ್ನಣೆಯನ್ನು ನೀಡಿ ಬಿಜ್ಜಳ ಏಕಾಏಕಿಯಾಗಿ ಭಂಡಾರದ ಲೆಕ್ಕಪರಿಶೋಧನೆಗೆ ತೊಡಗುತ್ತಾನೆ. ಆದರೆ ಅಲ್ಲಿ ಪವಾಡ ಸದೃಷವಾಗಿ ಲೆಕ್ಕಪತ್ರಗಳೆಲ್ಲ ಸರಿಯಾಗಿದ್ದು ಹಣವು ಇಮ್ಮಡಿಗೊಳ್ಳುತ್ತದೆ. ಇದರಿಂದ ಬಸವಣ್ಣನ ನಿಷ್ಠೆ, ಶ್ರದ್ಧೆಯು ತಿಳಿಯುತ್ತದೆ. ಸಾಮಾನ್ಯವಾಗಿ ಜಂಗಮರ ದಾಸೋಹಕ್ಕಾಗಿ ಬಸವಣ್ಣ ಬಿಜ್ಜಳನ ಭಂಡಾರದ ಹಣವನ್ನು ಉಪಯೋಗಮಾಡುತ್ತಾನೆಂದು ಜನರು ಮಾತನಾಡಿಕೊಳ್ಳುತ್ತಿದ್ದರೇನೋ? ಆ ಕಾರಣಕ್ಕಾಗಿ ಬಸವಣ್ಣ ಈ ರೀತಿ ಹೇಳುತ್ತಾನೆ.

ಊರಮುಂದೆ ಹಾಲಹಳ್ಳ ಹರಿವುತ್ತಿರಲು
ಓರೆಯಾವಿನ ಬೆನ್ನಹರಿಯಲದೇಕಯ್ಯಾ?
ಲಜ್ಜೆಗೆಡಲೇಕೆ? ನಾಣುಗೆಡಲೇಕೆ?
ಕೂಡಲಸಂಗಮದೇವನುಳ್ಳನ್ನಕ್ಕ?
ಬಿಜ್ಜಳನ ಬಂಡಾರವೆನಗೇಕಯ್ಯಾ.
(ಬಸವಣ್ಣನವರ ವಚನ ಸಂಪುಟ ವಚನ ಸಂಖ್ಯೆ –೭೫೫)

ತಾನು ಸತ್ಯ ಶುಧ್ಧನಾಗಿದ್ದು ಕಾಯಕವನ್ನು ನಿಷ್ಠೆಯಿಂದ ಮಾಡಿರಬೇಕಾದಾಗ ಯಾರ ಬೆದರಿಕೆಗೂ ಹೆದರದೇ ತನ್ನ ತನವನ್ನು ಉಳಿಸಿಕೊಂಡವನಾಗಿದ್ದಾನೆ. ತಾನು ಸಿದ್ದದಂಡಾದಿಪತಿಯ ಅಳಿಯನಾಗಿದ್ದರಿಂದ ಆತನು ಮರಣದ ನಂತರ ಸರ್ವ ಆಸ್ತಿಗೂ ವಾರಸುದಾರನಾಗುತ್ತಾನೆ. ಜೋತೆಗೆ ತಾನೂ ಉನ್ನತವಾದ ಹುದ್ದೆಯಾದ ಮಂತ್ರಿ ಪದವಿಯಲ್ಲಿದ್ದು ಅದರಿಂದ ಬಂದದ್ದನ್ನು ದಾಸೋಹಕ್ಕೆ ಬಳಸುತ್ತಿರುತ್ತಾನೆ. ಆದರೆ ಯಾವುದೋ ಸಂಚಿನಿಂದ ಬಿಜ್ಜಳ ಬಸವಣ್ಣನ ಮೇಲೆ ದಾಲಿಯನ್ನು ಮಾಡುವ ಪ್ರಯತ್ನ ಮಾಡುತ್ತಾನೆ. ಹಾಗಾಗಿ ಬಸವಣ್ಣ ತನ್ನ ಹೊಟ್ಟೆಗೆ, ಜೀವನಕ್ಕೆ ನಾನು ಯಾರನ್ನು ಬೇಡುವವನಲ್ಲ ಮತ್ತು ಯಾವ ವಿಧವಾದ

ಬಿಜ್ಜಳನ ಬಂಡಾರದ ಹಣವನ್ನು ತಾನೂ ಉಪಯೋಗಿಸಿಲ್ಲ, ಉಪಯೋಗಿಸಲಾರೆನೆಂದು ನಿರ್ಭಯದಿಂದ ನುಡಿಯುತ್ತಾನೆ.

ಕಾಯದ ಕವಳಕ್ಕಂಜಿ, 'ಕಾಯಯ್ಯ' ಎನ್ನೆನು,

ಜೀವನೋಪಾಯಕ್ಕಂಜಿ, 'ಈಯಯ್ಯ' ಎನ್ನೆನು,

'ಯದ್ ಭಾವಂ ತದ್ ಭವತಿ':

ಉರಿಬರಲಿ, ಸಿರಿಬರಲಿ

ಬೇಕು ಬೇಡೆನ್ನೆನಯ್ಯಾ

ನಿಮ್ಮ ಹಾರೆನು, ಮಾನವರ ಬೇಡೆನು.

ಆಣೆ ನಿಮ್ಮಾಣೆ ಕೂಡಲಸಂಗಮದೇವಾ.

(ಬಸವಣ್ಣನವರ ವಚನ ಸಂಪುಟ ವಚನ ಸಂಖ್ಯೆ –೬೯೬)

ತನ್ನ ತತ್ವಸಿದ್ಧಾಂತಗಳಿಗೆ ಬದ್ಧನಾಗಿ ಬಸವಣ್ಣ ನಿಷ್ಠೆಯಿಂದ ಇದ್ದು ತನ್ನ ನಿಲುವುಗಳನ್ನು ತಾನೂ ಕಂಡುಂಡ ಸತ್ಯವನ್ನು ಯಾವ ಭಯ, ಭೇದ ಭಾವವಿಲ್ಲದೇ ಹೇಳುವ ಸ್ವಭಾವ ಆತನದು. "ನ್ಯಾಯ ನಿಷ್ಠುರಿ "ಯಾಗಿ ಬಸವಣ್ಣ ಇದ್ದಾನೆ. ಇದಕ್ಕೆ ಪ್ರಭುತ್ವವೇ ಅಡ್ಡಬರಲಿ, ಅಥವಾ ಪುರೋಹಿತಶಾಹಿಯೇ ವಿರೋಧಿಸಲಿ ಯಾವ ಕಾರಣಕ್ಕೂ ಯಾರನ್ನು "ದಾಕ್ಷಿಣ್ಯಪರ" ವಾಗಿ ನೋಡುವ ಮನೋಭಾವ ಬಸವಣ್ಣನದಲ್ಲ. ಏಕೆಂದರೆ ಹನ್ನೆರಡನೆಯ ಶತಮಾನದಂತಹ ಕಾಳಘಟ್ಟದಲ್ಲಿ ಇಡೀ ಸಮಾಜವನ್ನು ಶಕ್ತಿ ಅಂದಿನ ಪ್ರಭುತ್ವಕ್ಕಿತ್ತು. ಅಂತಹ ಪ್ರಭುತ್ವದ ವಿರುದ್ಧ ಸೆಟೆದು ನಿಲ್ಲುವುದು ಸಾಮಾನ್ಯವಾದ ಕೆಲಸವಲ್ಲ. ತನ್ನ ಅಳಿವು ಉಳಿವಿನ ಪ್ರಶ್ನೆಯು ಕಾಡಬಹುದು. ಅಂತಹಾ ವಾತವರಣಕ್ಕೆ ಸಿಲುಕದೆ ಯಾವ ಸಂಕೋಚವಿಲ್ಲದೆ ಭಯವಿಲ್ಲದೆ ಇಡೀ ವ್ಯವಸ್ಥೆಯನ್ನೆ ನಿರ್ವಹಿಸುತ್ತಾ ಹಿಡಿತದಲ್ಲಿಟ್ಟುಕೊಂಡಿದ್ದ ಪ್ರಭುತ್ವದ ವಿರೋಧಿಯಾಗಿ ಸಾಮಾಜಿಕ ಹೋರಾಟಕ್ಕೆ ಬಸವಣ್ಣ ತೊಡಗುತ್ತಾನೆ. "ನೆಲದಾಳ್ವ ಹೆಣನೆಂದರೆ ಒಂದಡಿಕಿಗೆ ಕೊಂಬುವರಿಲ್ಲ ನೋಡಯ್ಯ" ಎಂದು ರಾಜನನ್ನು ಪ್ರಭುತ್ವವನ್ನು ಧಿಕ್ಕರಿಸುತ್ತಾನೆ. ಸಮಾಜದ ಅತ್ಯಂತ ಕಟ್ಟಕಡೆಯ ವ್ಯಕ್ತಿಗೆ, ಪ್ರಾಣಿ, ಪಕ್ಷಿಗಳಿಗೆ ಇದ್ದಷ್ಟು ಬೆಲೆ ರಾಜನಿಗಿಲ್ಲ ಎಂದೇ ವಾದಿಸುತ್ತಾನೆ. ಈ ಎಲ್ಲಾ ವಿರೋಧಗಳ ನಡುವೆಯೂ ಕೆಲವು ಗಂಭೀರ ಪರಿಸ್ಥಿತಿಗೆ ಸಿಲುಕಿಕೊಂಡಾನ ನುಡಿದ್ದಾನೆಯೋ ಏನೂ? ಅರಸನ, ಪ್ರಭುತ್ವಕ್ಕೆ ತಲೆಬಾಗಿ ನಡೆಯುವುದು ಆತನ ದ್ವಂದ್ವ ನೀತಿ ಆತನ ಅಸ್ಪಷ್ಟ ನಿಲುವು ಕಾಣುತ್ತದೆ.

ಅರಸನು ಮುನಿದಡೆ ನಾಡೊಳಗಿರ ಬಾರದಯ್ಯ

ಗಂಡ ಮುನಿದಡೆ ಮನೆಯೊಳಗೆ ಇರಬಾರದಯ್ಯ

ಕೂಡಲಸಂಗಮದೇವಾ

ಜಂಗಮ ಮುನಿದಡೆ ನಾನೆಂತು ಬದುಕುವೆ?

(ಬ.ವ.ವ.ಸಂ–೮೨೫)

ಆದರೆ ಇನ್ನೊಂದು ವಚನದಲ್ಲಿ ಸಂಪೂರ್ಣವಾಗಿ ರಾಜನಿಗೆ ಮತ್ತು ರಾಜತ್ವಕ್ಕೆ ವಿರೋಧಿಯಾಗಿಯೇ ಬಸವಣ್ಣ ನಿಲ್ಲುತ್ತಾನೆ.

ಆನೆ ಅಂಕುಶಕ್ಕೆ ಅಂಜುವುದೆ ಅಯ್ಯ?

ಮಾಣದೆ ಸಿಂಹ ನಖವೆಂದು ಅಂಜೂದಲ್ಲದೆ.

ಆನಿ ಬಿಜ್ಜಳಂಗಂಜಜವುನೆ ಅಯ್ಯ?

ಕೂಡಲಸಂಗಮದೇವಾ,

ನೀನು ಸರ್ವ ಜೀವದಯಾಪರಿಯಾದ ಕಾರಣ

ನಿನಗಂಜವುವೆನಲ್ಲದೆ

(ಬ.ವ.ವ.ಸಂ–೭೩೭)

ಅದರಂತೆ ಬಸವಣ್ಣ ತಾನು ಯಾರಿಗೂ ಹೆದರದೆ ತನ್ನ ನಿರ್ಧಾರಗಳಿಗೆ ಬದ್ಧನಾಗಿಯೇ ಉಳಿಯುತ್ತಾನೆ. ಅದಕ್ಕಾಗಿ ಅವನು ಎಂತಹ ಸಮಸ್ಯೆಗಳನ್ನು ಬೇಕಾದಾರು ಎದುರಿಸುವವನಾಗಿದ್ದಾನೆ.

ನಾಳೆ ಒಪ್ಪುದು ನಮಗಿಂದೆ ಬರಲಿ,

ಇಂದು ಒಪ್ಪುದು ನಮಗೀಗಲೇ ಬರಲಿ,

ಇದಕಾರಂಜುವರು, ಇದಕಾರಳುಕುವರು?

ಜಾತಸ್ಯ ಮರಣಂಧ್ರುವಂ ಎಂಬುದಾಗಿ

ನಮ್ಮ ಕೂಡಲ ಸಂಗಮದೇವರು ಬರೆದ ಬರಹವ ತಪ್ಪಿಸುವಡೆ

ಹರಿಬ್ರಹ್ಮಾದಿಗಳಿಗಳವಲ್ಲಿ

(ಬ.ವ.ವ.ಸಂ.೬೯೭)

ಪ್ರಭುತ್ವ ಮಾತಿಗೆ ಸೊಪ್ಪಹಾಕಿ ತನ್ನ ಹೋರಾಟವನ್ನು ಅರ್ಧಕ್ಕೆ ನಿಲ್ಲಿಸುವ ಪ್ರಯತ್ನ ಮಾಡದೆ ತಾನು ಕೈಗೆತ್ತಿಕೊಂಡ ಹೋರಾಟದಲ್ಲಿ ಯಶಸ್ವಿಯಾಗದಿದ್ದರು ಪ್ರಾಯಶಃ ಯಶಸ್ವಿಯಾಗಿದ್ದಾನೆ. ಕೆಲವು ಚಾಡಿಕೋರರ ಮಾತಿಗೆ ಬೆಲೆಕೊಟ್ಟು ಬಿಜ್ಜಳ ಬಸವಣ್ಣನಮೇಲೆ ಹಾಗೂ ಶರಣರ ಮೇಲೆ ದಾಳಿಯನ್ನು ಮಾಡಿಸುತ್ತಾನೆ. ಇದಕ್ಕೆ ಕಾರಣ, ಸಾಮಾಜಿಕವಾಗಿ ಸಮಾನತೆಯನ್ನು ತರುವ ನಿಟ್ಟಿನಲ್ಲಿ ಬಸವಣ್ಣ ಬ್ರಾಹ್ಮಣರ ಮದುವರಸನ ಮಗಳನ್ನು ಹರಳಯ್ಯ ಮನೆಗೆಕೊಟ್ಟು ಅಂತರ್ಜಾತಿಯ ವಿವಾಹವನ್ನು ಮಾಡುತ್ತಾನೆ. ಇದರಿಂದ ಸಿಟ್ಟುತಾಳಲಾರದ ಪುರೋಹಿತಶಾಹಿ ವರ್ಗ ಹಾಗೂ ರಾಜ ಬಿಜ್ಜಳನ ಕೋಪಕ್ಕೆ ಬಸವಣ್ಣ ಬಲಿಯಾಗಬೇಕಾಗುತ್ತದೆ. ಕೊನೆಗೆ ಕೂಡಲಸಂಗಮಕ್ಕೆ ಹೋಗಿ ಬಸವಣ್ಣ ಸಂಗನಾಥನಲ್ಲಿ ಐಕ್ಯನಾಗುತ್ತಾನೆ. ತಾನು ನಂಬಿದ್ದ ಒಂದು ಆದರ್ಶ ಸಂಸ್ಕೃತಿಯನ್ನು ತನ್ನ ಶಕ್ತಿ ಮೀರಿ ಮುನ್ನೆಡೆಸುವ ಪ್ರಯತ್ನದಲ್ಲಿ ಬಸವಣ್ಣ ಯಶ್ವಿಯಾಗುತ್ತಾನೆ. ಆದರೆ ವಚನ ಚಳುವಳಿಯ ಪ್ರಭುತ್ವದ ಮುಂದೆ ಪುರೋಹಿತ ಶಾಯಿಯ ಮುಂದೆ ಸೋತರು ಅದರು ಸೋಲು ಎಂದು ಹೇಳು ಮುತ್ಸದ್ದಾಗಿರದೆ ಅದೊಂದು ಹೊಸ ಸಮಾಜಕ್ಕೆ ನಡೆದ ಕ್ರಾಂತಿಯಾಗಿಯೇ ಕಾಣುತ್ತದೆ.

**ಆರ್ಥಿಕವಾಗಿ**

ಧಾರ್ಮಿಕ ಚಳುವಳಿ ಎಂದು ವಚನ ಚಳುವಳಿಯನ್ನು ಕರೆದರು . ಅದರು ಹಲವಾರು ವಿಧದಲ್ಲಿ ಹಲವು ಬಗೆಯಲ್ಲಿ ಕ್ರಾಂತಿಯಾಗಿ ಪರಿಣಾಮಬೀರಿದ್ದಾಗಿದೆ. ಸಮಾಜಿಕವಾಗಿ ಸಮಾಜ ಸುಧಾರಣೆಯ ಜವಾಬ್ದಾರಿಯನ್ನು ಹೊತ್ತಂತೆ, ಅದು ಆರ್ಥಿಕವಾಗಿ ಕ್ರಾಂತಿಯನ್ನು ಮಾಡಿದ್ದಾಗಿದೆ. ಇಡೀ ಪ್ರಪಂಚಕ್ಕೆ ಈ ಚಳುವಳಿ ಅಥವಾ ಬಸವಣ್ಣ ನೀಡಿದ ಕೊಡುಗೆಯಲ್ಲಿ "ಕಾಯಕ" ಪರಿಕಲ್ಪನೆ ವಿಶಿಷ್ಟ ಹಾಗೂ ಉನ್ನತ ಮಟ್ಟದ ಸಿದ್ಧಾಂತವಾಗಿದೆ. ಬಸವಣ್ಣ ಸಮಾಜ ಸುಧಾರಕನು ಭಕ್ತನು, ಅನುಭಾವಿಯೂ ಹಾಗೆಯೇ ಆರ್ಥಿಕ ತಜ್ಞನೂ ಕೂಡ ಆಗಿದ್ದಾನೆ. ಏಕೆಂದರೆ ಒಂದು ಭದ್ರವಾದ ಸಮಾಜವು ಸ್ವಾವಲಂಬಿಯಾಗಿ ಶಾಶ್ವತವಾಗಿ ನೆಲೆಗೊಳ್ಳಬೇಕಾದರೆ ಆ ಸಮಾಜವು ಆರ್ಥಿಕವಾಗಿ ಭದ್ರತೆಯನ್ನು ಪಡೆಯಬೇಕಾಗುತ್ತದೆ. ಆ ನಿಟ್ಟಿನಲ್ಲಿ ಬಸವಣ್ಣ 'ಕಾಯಕ ಮತ್ತು ದಾಸೋಹ'ದ ಪರಿಕಲ್ಪನೆಯನ್ನು ನೀಡಿ ಸಮಾಜದ ಉನ್ನತೀಕರಣಕ್ಕೆ ಕಾರಣಕರ್ತನಾಗಿದ್ದಾನೆ. ಸಮಾಜದ ಪ್ರತಿಯೊಬ್ಬ ನಾಗರೀಕನು ಕೂಡ ವೃತ್ತಿಯನ್ನು ಕೈಗೊಳ್ಳಬೇಕು ಇದರಿಂದ ಆರ್ಥಿಕವಾಗಿ ಸ್ವಾಲಂಬಿಯಾಗಿ ತನ್ನ ಹಾಗೂ

ಸಮಜಾದ ಅಭಿವೃದ್ಧಿ ಸಾಧ್ಯ ಎಂಬ ಮಾತು ನಿಜ. ಸಮಾಜದ ವಿವಿಧ ಮೂಲಗಳಿಂದ ಜನರು ಬಂದಿದ್ದು ತಮ್ಮ ತಮ್ಮ ವೃತ್ತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಾಗ ಮಾತ್ರ ಸಮಾಜವು ಆರ್ಥಿಕವಾಗಿ ಸಬಲವಾಗುತ್ತದೆ ಎಂದು ಪ್ರತಿಯೊಂದು ವೃತ್ತಿಯು ಶ್ರೇಷ್ಠ ಎಂದು ಹೇಳುತ್ತಾನೆ. ಹೀಗೆ ಮಾಡಿ ವೃತ್ತಿಯಿಂದ ಬಂದಂತಹ ಲಾಭದಲ್ಲಿ ತನಗೆ ಎಷ್ಟು ಬೇಕೋ ಅಷ್ಟನ್ನು ಉಪಯೋಗಿಸಿಕೊಂಡು ಉಳಿದದ್ದನ್ನು ದಾಸೋಹಕ್ಕೆ ಬಳಸಬೇಕೆಂದು ಹೇಳುತ್ತಾನೆ. ಇದರಿಂದ ಎಲ್ಲಾ ಜನರ ನಡುವೆ ಆರ್ಥಿಕವಾದ ಸಮಾನತೆ ನೆಲೆ ನಿಲ್ಲುತ್ತದೆ. ಇಲ್ಲದಿದ್ದರೆ ಆರ್ಥಿಕವಾದ ಅಸಮಾನತೆ ತಲೆದೂರಿ ಇಲ್ಲದವರು ಹಾಗೂ ಶ್ರೀಮಂತರ ನಡುವೆ ಕಂದರ ಏರ್ಪಟ್ಟು ಸಮಾಜದ ಸ್ವಾಸ್ಥ್ಯ ಹಾಳಾಗುತ್ತದೆ ಎಂಬ ತತ್ವ ಯಾವುದೇ ಅರ್ಥಶಾಸ್ತ್ರಜ್ಞನಿಗಿಂತ ಕಡಿಮೆಯಾದ ತತ್ವವಲ್ಲ ಎಂದರೇ ತಪ್ಪಲ ಅದೇ ರೀತಿಯಲ್ಲಿ ಬಸವಣ್ಣನು ತನ್ನ ಮಾತಿನಂತೆ ತನ್ನ ಕಾಯಕದ ಫಲವನ್ನು ಜಂಗಮರ ದಾಸೋಹಕ್ಕೆ ಬಳಸುತ್ತಾನೆ.

ಹೊನ್ನಿನೊಳಗೊಂದೆರೆಯ
ಸೀರೆಯೊಳಗೊಂದೆಳೆಯ
ಇಂದಿಂಗೆ ನಾಳಿಂಗೆ ಬೇಕೆಂದೆನಾದಡೆ
ನಿಮ್ಮಾಗೆ, ನಿಮ್ಮ ಪ್ರಮಥರಾಗೆ
ನಿಮ್ಮ ಶರಣರಿಲ್ಲದೆ ಮತ್ತೊಂದನರಿಯ
ಕೂಡಲಸಂಗಮದೇವಾ

(ಬಸವಣ್ಣನವರ ವಚನಗಳು ವಚನ ಸಂ.೮೩೬)

ಆವನೇವನಾದಡೇನು? ಹೇಮವಿಲ್ಲದಂಗೈಸಬಹುದೆ?
ಕೂಡಲಿಲ್ಲೆಂಬುದರಿಂದ ಸಾಯಲುಬಹುದು, ಸೈರಿಸಬಾರದು
ಬೇಡುವವರ ನೋಡಿ ನೋಡಿ ಈಯಲಿಲ್ಲದ ಜೀವನವದೇಕೆ
ಕೂಡಲಸಂಗಮದೇವ

(ಬ.ವ.ವ.ಸಂ.೮೩೯)

ಕಾಯಕದಿಂದ ಬಂದುದನ್ನು ಸಮಾಜಕ್ಕೆ, ಜಂಗಮಕ್ಕೆ ಬಳಸದೆ, ತನ್ನ ಸ್ವಾರ್ಥಕ್ಕಾಗಿ ಬಳಸಿಕೊಂಡು ಗಳಿಸಿಕೊಂಡವರನ್ನು ಬಸವಣ್ಣ ಪ್ರಾಣಿ, ಪಕ್ಷಿಗಳಿಗಿಂತಲೂ ಕೀಳು ಎಂದು ಅವರನ್ನ ದೂರುತ್ತಾನೆ.

ಏಕೆಂದರೆ ಮನುಷ್ಯನಿಗೆ ತಾನು ಸುಖತವಾಗಿರುವಂತೆ, ತನ್ನ ಸುತ್ತಮುತ್ತಲಿನ ಸಮಾಜವು ಸುಖವಾಗಿರಬೇಕೆಂದುಕೊಂಡು ದಾನ ಇತ್ಯಾದಿಯಾಗಿ ಮಾಡಬೇಕು ಇದರಿಂದ ಸಮಾಜದ ದುರ್ಬಲವರ್ಗಕ್ಕೆ ಆಶ್ರಯ ದೊರೆಯತ್ತದೆಂಬ ಕಲ್ಪನೆ ಹಿಂದಿನ ಆಧುನಿಕ ಸಂದರ್ಭಕ್ಕೆ ಹೊಂದಿಕೆಯಾಗುವಂತಹದ್ದಾಗಿದೆ.

ಕಾಗೆ ಒಂದುಗುಳ ಕಂಡಡೆ ಕರೆಯದೆ ತನ್ನ ಬಳಗವನು?
ಕೋಳಿ ಒಂದು ಕುಟುಕ ಕಂಡಡೆ ಕೂಗಿ ಕರೆಯದೆ ತನ್ನ ಕುಲವನೆಲ್ಲವ?
ಶಿವಭಕ್ತನಾಗಿ ಭಕ್ತಿ ಪಕ್ಷವಿಲ್ಲದಿದ್ದರೆ ಕಾಗೆ ಕೋಳಿಯಿಂದ ಕರಕಷ್ಟ
ಕೂಡಲಸಂಗಮದೇವಾ.

(ಬ.ವ.ವ.ಸ.೮೩೮)

ಬಸವಣ್ಣನವರು ಸಂಪತ್ತನ್ನು ಶೇಖರಣೆ ಮಾಡಿಕೊಳ್ಳುವುದನ್ನು ವಿರೋಧಿಸಿದವರಾಗಿದ್ದಾರೆ. ಏಕೆಂದರೆ ಅವಶ್ಯಕತೆಗಿಂತ ಹೆಚ್ಚು ಇಟ್ಟುಕೊಳ್ಳುವುದು ಒಂದು ರೀತಿಯಲ್ಲಿ ಕಳ್ಳತನವೇ ಸರಿ ಎಂದು ಹೇಳುತ್ತಾರೆ. ಸಮಾಜದ ಏಳಿಗೆಗೆ ಶೇಖರಣೆ ಎನ್ನುವುದು ಮಾರಕವಾದುದು ಅನುಭವಿಸಿ ಉಳಿದದ್ದನ್ನು ಹಂಚದಿದ್ದರೆ ಅದು ಅಲ್ಲಿಯೇ ನಿಂತು ಆರ್ಥಿಕವಾಗಿ ಚಲನೆಯುನ್ನುಂಟು ಮಾಡದೆ ಗೊಡ್ಡಾಗಿ ಬಿಡುವ  ಸಾಧ್ಯತೆ ಇದೆ, ಹಾಗಾಗಿ ಈ ತತ್ವವು ಹೆಚ್ಚು ಪ್ರಾಮುಖ್ಯವಾಗಿದ್ದು, ಇದರ ಮೂಲಕ ವ್ಯಕ್ತಿ ತನ್ನ ಅಂತಗರಂಗವನ್ನು ಶೋಧಿಸಿಕೊಳ್ಳಬಹುದಾಗಿದೆ. ಅತಿಯಾದ ಆಶೇ, ಆಮಿಷಗಳಿಂದ ಜನರು ಭ್ರಷ್ಟರಾಗುತ್ತಾರೆ. ಆದ್ದರಿಂದ ತನ್ನ ಕಾಯಕಕ್ಕೆ ಅನುಗುಣವಾಗಿ ಫಲವನ್ನು ಪಡೆಯಬೇಕೆಂದು ಹೇಳಿ ನಿಷ್ಠೆ, ಪ್ರಾಮಾಣಿಕತೆಯನ್ನು ಸಮಾಜದಲ್ಲಿ ನೆಲೆಸುವಂತೆ ಮಾಡುತ್ತಾರೆ. 'ಕಾಯಕ' ಎಂದು ವೃತ್ತಿಯನ್ನು ಕರೆದು ವೃತ್ತಿ ಕೇವಲ ವೃತ್ತಿಯಲ್ಲ ಅದು ವಿಶಿಷ್ಠ ಸ್ವರೂಪವಾದ, ಧಾರ್ಮಿಕವಾದ, ಪವಿತ್ರವಾದ ಅರ್ಥವನ್ನು ಬಸವಣ್ಣ ನೀಡಿ ಸಮಾಜದಲ್ಲಿ ಕಾಯಕದ ಮಹತ್ವವು ಹಿರಿದಾದುದು ಎಂದು ಹೇಳುತ್ತಾನೆ. ಇದರಿಂದ ಸಮಾಜದ ಎಲ್ಲಾ ವರ್ಗದ ಜನರು ಪವಿತ್ರ ಭಾವನೆಯಿಂದ ತಮ್ಮ ತಮ್ಮ ವೃತ್ತಿಯಲ್ಲಿ ತೊಡಗುತ್ತಾರೆ. ಅಂತಹ ವೃತ್ತಿಗಳು ಕೇವಲ ಆರ್ಥಿಕವಾಗಿ ಸಬಲರನ್ನಾಗಿಸದೆ ' ಕಾಯಕವೇ ಕೈಲಾಸ' ಎಂದು ಬಗೆದು ನಿಷ್ಠೆಯಿಂದ ತೊಡಗಿದ್ದಾನೆ. ಸಾಕ್ಷಾತ್ ಭಗವಂತನ ಕೃಪೆ ದೊರೆಯುತ್ತಿದೆಂಬ ಆಧ್ಯಾತ್ಮಕ ಕಲ್ಪನೆಯಲ್ಲಿ ತೊಡಗುತ್ತಾರೆ. ಜೊತೆಗೆ ನಿಷ್ಠೆಯಿಂದ ಕಾಯಕ ಮಾಡುವುದರಿಂದ ತಮ್ಮ ಅಂತರಂಗದ ಶುದ್ಧಿಯುನಡೆದು ಶುದ್ಧತೆಯ ಜೀವನ ನಡೆಸುವಂತಾಗುತ್ತದೆ.

ಬಸವಣ್ಣ ಒಬ್ಬ ಸಮಾಜಸುಧಾರಕನಾಗಿ, ಹೋರಾಟಗಾರನಾಗಿದ್ದರೂ ತನ್ನ ಅಂತರಂಗದ ಶುದ್ಧತೆಯಲ್ಲಿ ತೊಡಗಿ ಒಳ ಹೊರಗು ಶುದ್ಧಾಂಗನಾಗಿದ್ದಾನೆ. ಸಾಮಾಜಿಕವಾಗಿ ತನ್ನನ್ನು

ತೊಡಗಿಸಿಕೊಂಡರೂ ಬಸವಣ್ಣ ತನ್ನ ಅಂತರಂಗದ ಪ್ರವೇಶ ಮಾಡಿ ತನ್ನ ತಪ್ಪು ಒಪ್ಪುಗಳನ್ನು ತಿದ್ದಿಕೊಂಡು ಸಾಗುವ ಮಾನವತವಾದಿಯಾಗಿದ್ದಾರೆ. ಬಸವಣ್ಣನವರು ತಮ್ಮ ಅಂತರಂಗವನ್ನು ವೈಯುಕ್ತಿಕವಾಗಿ, ಸಾಮಾಜಿಕವಾಗಿ, ಧಾರ್ಮಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಶೋಧಿಸಿಕೊಂಡು ಆತ್ಮವಿಮರ್ಶೆಯನ್ನು ಮಾಡಿಕೊಂಡು ಶುದ್ಧತೆಯ ಜೀವನ ನಡೆಸಿ ಹೋರಾಟಗಾರರಾಗಿದ್ದಾರೆ.

ಬಸವಣ್ಣನವರು ತಮ್ಮ ಅಂತರಂಗವನ್ನು ಒಳ-ಹೊರಗು ಎಂಬ ಭೇದವಿಲ್ಲದೆ ಯಶಸ್ಸಿನ ಸ್ಥಿತಿಯನ್ನು ಪ್ರಕಟಿಸಿದ್ದಾರೆ. ಒಂದು ಚಳುವಳಿಯಲ್ಲಿದ್ದ ಇವರ ಮನಸ್ಥಿತಿ ವೈಯುಕ್ತಿಕತೆಯನ್ನು ಮೀರಿ ಸಮಾಜದ ಒಳಿತಿಗಾಗಿ ಆಲೋಚಿಸಿದ ಚಿಂತನೆಗಳಾಗಿವೆ ಹೊರತು ಮನಸ್ಸಿನ ಆಂತಕ, ತುಮುಲ, ತಲ್ಲಣ ತುಡಿ, ಮಿಡಿ ಅಸಹಜವಾಗಿ ಅಭಿವ್ಯಕ್ತಿಗೊಂಡಿಲ್ಲ. ತಮ್ಮ ಅಂತರಂಗವನ್ನು ಶೋಧನೆ ಮಾಡಿಕೊಂಡ ವಚನಕಾರರಲ್ಲಿ ಬಸವಣ್ಣನವರು ಪ್ರಮುಖವಾದ ಸ್ಥಾನದಲ್ಲಿ ಕಾಣುತ್ತಾರೆ.

## ಕೊನೆ ಟಿಪ್ಪಣಿ

೦೧. ಲಿಂಗದೇವರು ಹಳೇ ಮನೆಯವರ ಲೇಖನ, ಬಸವಣ್ಣನವರ ವಚನಗಳು ಸಾಂಸ್ಕೃತಿಕ ಮುಖಾಮುಖಿ ಸಂ.ಅಮರೇಶನುಗಡೋಣಿ, ಪ್ರಸಾರಾಂಗ ಕ.ವಿ.ವಿ. ಹಂಪಿ ೨೦೦೪ ಪು.ಸಂ.೧೩೯.

೦೨. ರಹಮತ್ ತರೀಕೆರೆಯವರ ಲೇಖನ ಬಸವತತ್ವ ಸಾಮಾಜಿಕ ಬದಲಾವಣೆ ಸಂ. ಮಹೇಶ ತಿಪ್ಪಶೆಟ್ಟಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ ಹಂಪಿ ೨೦೦೩ ಪು.ಸಂ.೧೦೯.

೦೩. ಕಲ್ಬುರ್ಗಿಯವರ ಬಸವಣ್ಣನವರ ವಚನ ಸಂಪುಟದಲ್ಲಿನ ವಚನಗಳನ್ನು ಬಳಸಿಕೊಳ್ಳಲಾಗಿದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ೧೯೯೩.

# ಅಧ್ಯಾಯ ೬

# ಉಪಸಂಹಾರ

ಬಸವಣ್ಣನವರ ವಚನಗಳಲ್ಲಿ ಅಂತರಂಗ ಶೋಧವನ್ನು ಕುರಿತಾದ ಪ್ರಸ್ತುತ ಅಧ್ಯಯನವನ್ನು, ವಚನಗಳಲ್ಲಿ ಕಂಡುಬರುವ ಬಸಣ್ಣನ ವ್ಯಕ್ತಿತ್ವವನ್ನು, ಅಂತರಂಗವನ್ನು ಕುರಿತು ಚರ್ಚಿಸಲಾಗಿದೆ. ಹನ್ನೆರಡನೆಯ ಶತಮಾನದ ಸಮಾಜೋಧಾರ್ಮಿಕ ಚಳುವಳಿಯ ನೇತೃತ್ವವನ್ನು ವಹಿಸಿಕೊಂಡ ಬಸವಣ್ಣನವರು ತನ್ನ ಅಂತರಂಗದ ಶೋಧನೆ ಮಾಡಿಕೊಳ್ಳುವುದರ ಜೊತೆಗೆ ಸಮಾಜಿಕ ಹೋರಾಟಗಾರನಾಗಿದ್ದಾರೆ. ಅವರಿಗೆ ಬೆಂಬಲವಾಗಿ ಸಂಗಾತಿಗಲಾಗಿ ಅಲ್ಲಮ ಪ್ರಭು ಚನ್ನಬಸವಣ್ಣ ಅಕ್ಕಮಹಾದೇವಿ, ಸಿದ್ಧರಾಮ, ನಿಲಾಂಬಿಕೆ, ಅಂಬಿಗರಚೌಡಯ್ಯ, ಮಡಿವಾಳ ಮಾಚಯ್ಯ ಹೀಗೆ ಮುಂತಾದ ಶರಣರು ಈ ಚಳುವಳಿಯಲ್ಲಿ ಭಾಗವಹಿಸಿ, ಕರ್ನಾಟಕದ ಚರಿತ್ರೆಗೆ ಮೆರಗನ್ನು ಕನ್ನಡ ಸಾಹಿತ್ಯಕ್ಕೆ ಒಂದು ಹೊಸ ತಿರುವನ್ನು ತಂದುಕೊಟ್ಟಿದ್ದಾರೆ.

ಇವರ ಸಾಮಾಜಿಕ ಹೋರಾಟಕ್ಕೆ ವಚನಗಳು ಫಲವಾಗಿ, ಕನ್ನಡದ ಉಪನಿಷತ್ತುಗಳೆಂದು ಕರೆಯಲ್ಪಡುವ ವಚನಗಳು ರಚನೆಗೊಂಡವು. ಈ ವಚನಗಳ ಮೂಲಕ ಕೇವಲ ಪಂಡಿತಮಗಳಿಗಳಿಗೆ ನಿರ್ಮಿತವಾದ ಸಾಹಿತ್ಯವು ಸಾಮಾನ್ಯ ಜನರ ಮನೆಮನದ ಬಾಗಿಲಿಗೆ ನುಗ್ಗಿದವು ಇವರ ಪರಿಣಾಮವಾಗಿ ಸಮಾಜದ ಎಲ್ಲ ವರ್ಗದ ಜನರು ಈ ವಚನ ಚಳುವಳಿಯಲ್ಲಿ ಭಾಗವಹಿಸುವಂತಾಯಿತು. ಸುಮಾರು ಎಂಟುನೂರು ವರ್ಷಗಳಷ್ಟು ಹಿಂದಿನ ಕರ್ನಾಟಕದ ಪರಿಸ್ಥಿತಿಯನ್ನು ನೋಡಿದರೆ, ಪ್ರಭುತ್ವದ ಹಿಡಿತದಲ್ಲಿ ವೈದಿಕಶಾಯಿ, ಪುರೋಹಿತ ವರ್ಗದ ಕಪಿ ಮುಷ್ಠಿಯಲ್ಲಿ ಸಾಮಾನ್ಯ ಜನರು ಸಿಲುಕಿಕೊಂಡು ನಳುತ್ತಿದದರು. ಸಮಾಜದಲ್ಲಿ ಅಸಮಾನತೆ ನೆಲೆನಿಂತು 'ಬ್ರಾಹ್ಮಣ ಮೊದಲು ಅಂತ್ಯಜ ಕಡೆಯಾಗಿ' ದುಸ್ತರ ಜೀವನವನ್ನು ಸಾಗಿಸಬೇಕಾಗಿತ್ತು. ಹಲವಾರು ಅಂಧ ಶ್ರದ್ಧೆಗಳು ಮೂಢನಂಬಿಕೆಗಳು ಹುಟ್ಟುಕೊಂಟು ಜಾತಿವ್ಯವಸ್ಥೆಯ ನಿರ್ಮಾಣಗೊಂಡು, ಜಾತಿವರ್ಣ ಪದ್ಧತಿಯು ತನ್ನ ಮಿಗಿಲನ್ನು ಸಾಧಿಸಿತ್ತು. ಸಮಾಜದ ಅತ್ಯಂತ ಕೆಳಸ್ಥರದ ಶೂದ್ರರು, ಪಂಚಮರು ದುಡಿಯುವ ವರ್ಗವಾಗಿತ್ತು. ಇಂತಹ ದುಡಿಯುವ

ವರ್ಗವನ್ನು ತಮ್ಮ ಕೈಗೊಂಬೆಂಗಳಂತೆ ದುಡಿಸಿಕೊಂಡು ತಮ್ಮ ಹಿತಸಾಧನೆಯನ್ನು ಮೇಲ್ವರ್ಗದ ಜನರು ಪಡೆಯುತ್ತಿದ್ದರು. ಸಮಾಜದ ಕೆಳಸ್ಥರದ ವರ್ಗದವರಲ್ಲಿ ಅವರವರಲ್ಲಿ ಅನೇಕ ಕುಲ, ಜಾತಿಗಳು ಹುಟ್ಟಿಕೊಂಡು ತಮ್ಮ ತಮ್ಮ ಜಾತಿಗನುಗುಣವಾದ ಸಂಪ್ರದಾಯ ರೂಢಿ,ಆಚರಣೆಗಳನ್ನು ಮಾಡಿಕೊಂಡು ತಮ್ಮದೇ ಆದ ಕಾಲ್ಪನಿಕ ದೈವಗಳನ್ನು ಹುಟ್ಟು ಹಾಕಿಕೊಂಡು ಮೂಢ ಸಂಪ್ರದಾಯಗಳಕ್ಕೆ ಬದ್ಧರಾಗಿ ಬದುಕುತ್ತಿದ್ದರು. ಇಂತಹದ್ದರ ಲಾಭ ಪಡೆದ ಸನಾತನ ಪರಂಪರೆಯು ಹಲವಾರು ದೈವಗಳನ್ನು ಹಿಗ್ಗಾಮುಗ್ಗ ಶೋಷಣೆ ಮಾಡುತ್ತಿದ್ದರು. ಅಲ್ಲದೆ ಸಮಾಜದಲ್ಲಿ ಅಸಮಾನತೆ ತಲೆದೋರಿ ಮೇಲು-ಕೀಳು, ಬಡವ-ಶ್ರೀಮಂತ ಹೀಗೆ ತಾರತಮ್ಯವು ಪ್ರಾರಂಭವಾಗಿ ದುರ್ಬಲರನ್ನು ದಲಿತರನ್ನು ತುಳಿದು ಬಕದುಕುವ ಒಂದು ಪರಂಪರೆಯು ಬೆಳೆದುಟ್ಟಿತ್ತು. ಸ್ತ್ರೀ-ಪುರುಷರ ನಡುವೆ ಅಸಮಾನತೆಯಿದ್ದು ಸ್ತ್ರೀಯರನ್ನು ಮಾಯೆ ಎಂದು ಜರಿದು ಅವಳು ಗಂಡಿನ ಮೋಕ್ಷಸಾಧನೆಗೆ ಅಡ್ಡಿ ಎಂಬ ಭಾವನೆ ನೆಲೆಸುವಂತೆ ಮಾಡಲಾಗಿತ್ತು. ಅವಳಿಗೆ ಯಾವುದೇ ರೀತಿಯಾದ ಸ್ವಾತಂತ್ರ್ಯವಾಗಲಿ, ಸಮಾನತೆಯಾಗಲಿ ಇರಲಿಲ್ಲ. ಧಾರ್ಮಿಕವಾಗಿ, ಆಧ್ಯಾತ್ಮಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಯಾವ ಬಗೆಯಲ್ಲೂ ಅವಳಿಗೆ ಪ್ರಾಶಸ್ತ್ಯವಿರಲಿಲ್ಲ. ಅವಳು ಕೇವಲ ಗಂಡಿನ ಅಡಿಯಾಳಾಗಿ ಕೆಳಸ್ಥರದ ದಲಿತರಿಗಿಂತಲೂ ಹೀನವಾದ ಸ್ಥಾನದಲ್ಲಿದ್ದಳು. ಇಂತಹ ವ್ಯವಸ್ಥೆಯ ವಿರುದ್ಧ ಸಿಡಿದೇಳದೆ,ತನ್ನ ಪಾಡಿಗೆ ತಾನು ಕೈಕಟ್ಟಿ ಕುಳಿತುಕೊಳ್ಳುವ ಸ್ಥಿತಿಯು ನಿರ್ಮಾಣವಾಗಿತ್ತು. ಇಂತಹ ಸಂದರ್ಭದಲ್ಲಿ ಹುಟ್ಟಿದ ಭಕ್ತಿ ಚಳುವಳಿಯು ಕೆಳವರ್ಗದ ಜನರ ಆಶೋತ್ತರಗಳಿಗೆ ಸ್ಪಂದಿಸುವ ನಿಟ್ಟಿನಲ್ಲಿ ಮಹಿಳೆಯವರಿಗೆ ಸೂಕ್ತ ಸ್ಥಾನಮಾನ ನೀಡುವ ದಿಶೆಯಲ್ಲಿ ಈ ಚಳುವಳಿಯ ಕಾರ್ಯ ಪ್ರವೃತ್ತಿಯಾಗಿತ್ತು. ಕರ್ನಾಟಕದ ಸಂದರ್ಭದಲ್ಲಿ ಬಸವಣ್ಣವನರ ನೇತೃತ್ವದಲ್ಲಿ ಸಸಮಾಜಿಕ ಹೋರಾಟವೊಂದು ಪ್ರಾಂರಂಭಗೊಂಡಿತು. ಇದರ ಆಕರ್ಷಣೆಯಿಂದ, ಜನರು ಈ ಹೊಸ ಹೋರಾಟಕ್ಕೆ ಹೊಸಧರ್ಮಕ್ಕೆ ಸಮಾಜದ ವಿವಿಧ ಸ್ಥರಗಳಿಂದ ಒಂದು ಆಧ್ಯಾತ್ಮಿಕವಾಗಿ ಸಾಧನೆ ಮಾಡತೊಡಗಿದರು.

ಇಂತಹ ಒಂದು ವೈಚಾರಿಕ ನೆಲೆಯ ಪ್ರಗತಿಪರ ಚಿಂತನೆಯ ಧರ್ಮದ ಆಗಮವನ್ನೇ ನಿರೀಕ್ಷಿಸುತ್ತಿದ್ದ ಸಮಾಜದ ಶೋಷಿತವರ್ಗವು, ಮಹಿಳೆಯವರು ಬಸವಣ್ಣನವರ ನೇತೃತ್ವ ವೀರಶೈವ ಧರ್ಮಕ್ಕೆ ಬಂದು ಸೇರಿಕೊಂಡು ಸೂಕ್ತವಾದ ಸ್ಥಾನವನ್ನು ಪಡೆಯುವಲ್ಲಿ ಯಶಸ್ವಿಯಾದರು. ಸಮಾನತೆಯ ತತ್ವದ ಮೇಲೆ ನಿರ್ಮಾಣಗೊಳ್ಳುವ ಆಶೆಯದಿಂದ ಜಾತಿಯತೆಯನ್ನು ತೊಡೆದು ಹಾಕಿ ಜಾತ್ಯಾತೀತವಾದ ಸುಂದರ ಆದರ್ಶ ಸಮಾಜದ ಕನಸನ್ನು ಹೊತ್ತುಕೊಂಡಿದ್ದ ಬಸವಣ್ಣನಿಗೆ ಇಮ್ಮಡಿ ಬಲ ದೊರಕಿತು. ಇದರಿಂದ ಸಮಾಜವನ್ನು ಶೋಷಣೆ ಮಾಡುತ್ತಿದ್ದ ಸನಾತನ ವಾದಿಗಳ ವಿರುದ್ಧ ಸಮಾಜದಲ್ಲಿ ನೆಲೆಸಿದ್ದ ಅಸಮಾನತೆಯ ವಿರುದ್ಧ, ಜಾತೀಯತೆಯ ವಿರುದ್ಧ ಹೋರಾಡಲು ಕಂಕಣಬದ್ಧರಾಗಿ

ಶರಣು ಹಾಗೂ ಬಸವಣ್ಣನವರು ನಿಂತರು. ಇದರಿಂದ ಇಡೀ ಸಮಾಜವೇ ಉದಾರತೆಯ, ಜಾತ್ಯಾತೀತಯೆ, ಸಮಾನತೆಯ ತತ್ವದಡಿಯಲ್ಲಿ ನಿಂತಿದ್ದ ಈ ಹೊಸ ಧರ್ಮಕ್ಕೆ ಶರಣರ ಆಂದೋಲನಕ್ಕೆ ಬಂದು ಸೇರಿದರು.

ಬಸವಣ್ಣನವರು ಕಲ್ಯಾಣವನ್ನು ತನ್ನ ಕಾರ್ಯಕ್ಷೇತ್ರವನ್ನಾಗಿಸಿಕೊಂಡು ಮಹಾಮನೆಯನ್ನು ಸ್ಥಾಪಿಸಿ ಆದರ್ಶ ಸಮಾಜದ ನಿರ್ಮಾಣವನ್ನು ಮಾಡಿದರು. ಇದರ ಜೊತೆಗೆ ಸಾಮಾಜಿಕವಾಗಿ ಆರ್ಥಿಕವಾಗಿ, ಧಾರ್ಮಿಕವಾಗಿ ರಾಜಕೀಯವಾಗಿ ಬದಲಾವಣೆಯನ್ನು ತರುವ ನಿಟ್ಟಿನಲ್ಲಿ ಕಾರ್ಯಕೈಗೊಂಡರು ಜನರ ಮಧ್ಯೆ ನೆಲಸಿರುವ ಅನೇಕ ತಾರತಮ್ಮಯಗಳನ್ನು ಹೋಗೋಡಿಸಿ 'ಕಾಯಕ' ' ದಾಸೋಹ' ಎಂಬ ತತ್ವಗಳನ್ನು ನೀಡಿ ಸಮಾಜದ ಏಳಿಗೆಗಾಗಿ ಶ್ರಮಿಸಿದರು. ಜೊತೆಗೆ ವ್ಯಕ್ತಿ ಸಾಮಾಜಿಕವಾಗಿ ಬೆಳೆದರೆ ಸಾಲದು ಆತ ಅಂತರಂಗದಲ್ಲಿ ಶುದ್ಧನಾಗಿರಬೇಕೆಂದು ಹೇಳಿ ನಿಷ್ಠೆ ಪ್ರಾಮಾಣಿಕತೆಯಿಂದ ಅಂತರಂಗದ ಶುದ್ಧಿ ಸಾಧ್ಯವೆಂದು ಇದರಿಂದ 'ಕಾಯಕವೇ ಕೈಲಾಸ' ವಾಗುವುದೆಂದು ಹೇಳಿದರು. ಸಾಮಾನ್ಯ ಜನರಿಗೆ ಅದರಲ್ಲೂ ಸಮಾಜದ ಕೆಳಸ್ಥರದ ವರ್ಗದ ಜನರಿಗೆ ದರ್ಮ, ದೇವರು ಎಂಬ ಕಲ್ಪನೆಯು ದೂರವಾಗಿದ್ದವರು. ಇದನ್ನರಿತ ಬಸವಣ್ಣನವರು ಇಷ್ಟಲಿಂಗವನ್ನು ನೀಡಿ ಜನರಿಗೆ ದೇವರು ಹತ್ತಿರವಾಗುವಂತೆ ಮಾಡಿದನು. ಮೂರ್ತಿಪೂಜೆನಯ್ನನು ನಿರಾಕರಿಸಿ, ಬಹುದೇವತಾರಾಧನೆಯನ್ನು ಖಂಡಿಸುವುದರ ಮೂಲಕ ಏಕದೇವೋಪಾಸನೆ ಅದರಲ್ಲೂ ಶಿವನೇ ಪರಮೋಚ್ಛ ದೈವವೆಂದು ಸಾರಿ ಸಾತ್ವೀಕ ಸ್ವರೂಪದ ದೈವವನ್ನು ನೀಡಿದನು. ಅಲ್ಲಿ ತನಕ ಮಡಿಕೆದೈವ, ಮೊರದೈವ,ಜ ಬಿಲ್ಲನಾರಿದೈವ, ಕಲ್ಲುದೈವ' ಎಂದು ಕಾಲಿಡಲು ಜಾಗವೆ ಇಲ್ಲದೆ ನಿರ್ಮಾಣಗೊಂಡಿದ್ದ ದೈವವನ್ನು ಸಂಪೂರ್ಣವಾಗಿ ನಿರಾಕರಿಸಿ ಮಾರಯ್ಯ, ದೂಳಯ್ಯ, ಕೇತಯ್ಯ ಮುಂತಾದ ಕ್ಷುದ್ರ ದೇವತೆಗಳನ್ನು ಖಂಡಿಸುತ್ತಾನೆ. ಸತ್ಯಸಂಗತಿಯನ್ನು ತಿಳಿದು ಶೋಷಣೆಗೆ ಬೇಸತ್ತು ಬಂದ ಜನರು ಬಸವಣ್ಣನವರಿಗೆ ಸಂಪೂರ್ಣವಾಗಿ ಬೆಂಬಲ ನಿಂತು ಸಾಮಾಜಿಕ ಹೋರಾಟದಲ್ಲಿ ಭಾಗವಹಿಸಿ ಇಡೀ ಪ್ರಪಂಚಕ್ಕೆ ಒಂದು ವಿಶಿಷ್ಠ ಬಗೆಯ ಕ್ರಾಂತಿಯ ಪರಿಚಯ ಮಾಡಿಕೊಟ್ಟಿದ್ದಾರೆ.

ಬಸವಣ್ಣನವರು ಸಮಾಜದ ಸುಧಾರಣೆಯ ಜೊತೆಗೆ ತಮ್ಮ ಅಂತರಂಗವನ್ನು ಶುದ್ಧಗೊಳಿಸಿಕೊಂಡು ಒಳ–ಹೊರಗೂ ಭೇದಭಾವ ಇಲ್ಲದಂತೆ ತಮ್ಮ ಮನಸ್ಸಿನ ಸ್ಥಿತಿಯನ್ನು ಪ್ರಕಟಿಸಿದ್ದಾರೆ. ತಮ್ಮ ವೈಯುಕ್ತಿಕತೆಯನ್ನು ಮೀರಿ ಸಮಾಜದ ಏಳಿಗೆಗಾಗಿ ಶ್ರಮಿಸಿದವರಾಗಿದ್ದಾರೆ. ಅವರದು ಸಮಾಜದ ಉನ್ನತಿಗಾಗಿ ಆಲೋಚಿಸಿದ ಚಿಂತನೆಗಳಾಗಿವೆ. ಮನಸ್ಸಿನ ಆಂತಕ, ತಲ್ಲಣ, ತುಮುಲ ಸಹಜವಾಗಿಯೇ ಅಭಿವ್ಯಕ್ತಗೊಂಡಿವೆ. ತಮ್ಮ ಅಂತರಂಗವನ್ನು ಶೋಧನೆ ಮಾಡಿಕೊಳ್ಳುವ ಮೂಲಕ ಶುದ್ಧತೆಯ ಜೀವನ ನಡೆಸಿದ ಸಮಾಜೋಧಾರ್ಮಿಕ ಹೋರಾಟಗಾರರಾಗಿದ್ದಾರೆ.

# ಪರಾಮರ್ಶನ ಗ್ರಂಥಗಳು

೧. ಅಮರೇಶ ನುಗಡೋಣಿ–ಬಸವಣ್ಣನ ವಚನಗಳು ಸಾಂಸ್ಕೃತಿಕ ಮುಖಾಮುಖಿ ಪ್ರಸಾರಾಂಗ ಕ.ವಿ.ವಿ. ಹಂಪಿ, ೨೦೦೪

೨. ಕಲಬುರ್ಗಿ. ಎಂ.ಎಂ.–ಬಸವಣ್ಣನವರ ವಚನಗಳು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೩

೩. ಕಲಬುರ್ಗಿ ಎಂ.ಎಂ.–ಸಂಕೀರ್ಣ ವಚನ ಸಂಪುಟ–೧, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೯೩

೩. ಚಂದ್ರಶೇಖರಯ್ಯ ಎಂ.ಜಿ.–ಬಸವಣ್ಣ ಜೀವಣ ಸಾಧನೆ ಕ.ಸಾ.ಪ. ಬೆಂಗಳೂರು, ೨೦೦೯

೪. ಚಿದಾನಂದಮೂರ್ತಿ. ಎಂ.–ವಚನ ಸಾಹಿತ್ಯ, ಪ್ರಸಾರಾಂಗ, ಬೆಂಗಳೂರು ವಿ.ವಿ., ೨೦೦೦

೫. ಚಿದಾನಂದಮೂರ್ತಿ. ಎಂ.–ಬಸವಣ್ಣ–ಕರ್ನಾಟಕ–ಭಾರತ, ಸಪ್ನ ಬುಕ್‌ಹೌಸ್, ಬೆಂಗಳೂರು ೨೦೦೪

೬. ತಿಪ್ಪೇರುದ್ರಸ್ವಾಮಿ–ವಚನ ಸಾಹಿತ್ಯ ವೈಚಾರಿಕ ಅಧ್ಯಯನ, ಧಾರವಾಡ, ೧೯೭೭

೭. ದೇ. ಜವರೇಗೌಡ–ವಚನಗಳಲ್ಲಿ ಸಮಾಜವಾದ, ಬೆಂಗಳೂರು. ವಿ.ವಿ. ೧೯೯೭

೮. ನಾಗಭೂಷಸ್ವಾಮಿ. ಓ.ಎಲ್.–ಇಂದಿನ ಹೆಜ್ಜೆ, ಹೆಗ್ಗೂಡು–೧೯೯೭ ೯. ನಾರಾಯಣ. ಪಿ.ವಿ.–ವಚನ ಸಮಗ್ರ, ವಸಂತ ಪ್ರಕಾಶನ, ಬೆಂಗಳೂರು, ೨೦೦೫

೧೦. ದೇ. ಜವರೇಗೌಡ–ವಚನಗಳಲ್ಲಿ ಸಮಾಜವಾದ, ಬೆಂಗಳೂರು. ವಿ.ವಿ. ೧೯೯೭

೧೧. ಬಸವರಾಜು. ಎಲ್–ಅಕ್ಕನ ವಚನಗಳು, ೧೯೯೭೨

೧೨. ಮಂಜುನಾಥ. ಸಿ.ಯು. ಮತ್ತು ವೀರಪ್ಪ. ಬಿ.ಸಿ–ವಚನಕಾರರು ವ್ಯಕ್ತಿ ಹಾಗೂ ಅಭಿವ್ಯಕ್ತಿ, ಶ್ರೀ ಸರ್ಪಭೂಷಣಮಠ, ಬೆಂಗಳೂರು, ೧೯೯೩

೧೩. ಮಲ್ಲಾಪುರ. ಬಿ.ವಿ.–ಅಲ್ಲಮಪ್ರಭುದೇವರ ವಚನ ಸಂಪುಟ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೯೩

೧೪. ಮಲ್ಲಾಪುರ. ಬಿ.ವಿ.– ಚನ್ನಬಸವಣ್ಣನವರ ವಚನ ಸಂಪುಟ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೯೩

೧೫. ಮೃತ್ಯುಂಜಯ ರುಮಾಲ–ಬಸವ ಸಾಹಿತ್ಯ, ಕನ್ನಡ ಸಾಹಿತ್ಯ ಅಕಾಡೆಮಿ, ೨೦೦೪

೧೬. ಮುಗಳಿ. ರಂ.ಶ್ರೀ–ಕನ್ನಡ ಸಾಹಿತ್ಯ ಚರಿತ್ರೆ, ಗೀತಾ ಬುಕ್‌ಹೌಸ್ ಮೈಸೂರು, ೧೯೫೩

೧೭. ರಹಮತ್ ತರೀಕೆರೆ (ಸಂ)-ಅಕ್ಕಮಹಾದೇವಿ ವಚನಗಳು ಸಾಂಸ್ಕೃತಿಕ ಮುಖಾಮುಖಿ, ಕನ್ನಡ. ವಿ.ವಿ. ಹಂಪಿ, ೨೦೦೫

೧೮. ವಿದ್ಯಾಶಂಕರ. ಎಸ್. ಸಿದ್ಧರಾಮೇಶ್ವರ ವಚನ ಸಂಪುಟ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೯೩

೧೯. ವಿದ್ಯಾಶಂಕರ. ಎಸ್. ಸಂಕೀರ್ಣ ವಚನ ಸಂಪುಟ-೨, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೯೩